॥ ಶ್ರೀ ॥

॥ ಶಿಖಾಯೈ ವೌಷಟ್ ॥

# ಶಿಖಾ

# ಸದ್ಬ್ರಾಹ್ಮಣ ಲಕ್ಷಣಂ

ಲೇಖಕರು :

**ಪಂ. ಶ್ರೀನಿವಾಸಾಚಾರ್ಯ ತಾಮ್ರಪರ್ಣಿ**

ಪ್ರಕಾಶಕರು :

**ಶ್ರೀ ವ್ಯಾಸದಾಸ ತಂತ್ರ ಪ್ರತಿಷ್ಠಾನ**

ನಂ. 36, 5ನೇ ಮುಖ್ಯರಸ್ತೆ, ಚಾಮರಾಜಪೇಟೆ,

ಬೆಂಗಳೂರು.

ಪ್ರಥಮ ಮುದ್ರಣ—1987

| ಪುಟಸಂಖ್ಯೆ | ಲೈನ್ | ತಪ್ಪು | ಒಪ್ಪು |
|---|---|---|---|
| 2 | 10 | ಪಿಷ್ಯದಲ್ಲಿ | ವಿಷಯದಲ್ಲಿ |
| 2 | 14 | ವಂದಾನ | ವಂದನಾ |
| 4 | 11 | ವ್ರಾತ್ಸೊ | ವ್ರಾತ್ಯೋ |
| 6 | 27 | ಲೋಪಾಕ್ಷಿ | ಲೋಗಾಕ್ಷಿಃ |
| 7 | 8 | ಇಡೀ ಪಂಕ್ತಿಯನ್ನು | ಬಿಟ್ಟು ಓದಿ |
| 8 | 29 | ಪ್ರಧಾನೆ | ಪ್ರಧಾನತೆ |
| 8 | 30 | ಪ್ರಹೃತ | ಪ್ರಹುತ |
| 8 | 31 | ಪ್ರಹೃತಾಸುಕೃತಿ | ಪ್ರಹುತಾನಕೃತಿ |
| 9 | 16 | ದ್ವಿಜ ಆದಮೇಲೆ | ನಾವಿಶ್ಯಃವಿಪ್ರಃ ಸ್ವೈತ್ರೈಹೀನಃ ಶ್ರೋತ್ರಿಯಃ ಎಂದು ಕೂಡಿಸಿ ಓದುವುದು |
| 9 | 16 | ನಾಸಂಸ್ಕಾರ | ನಾಸಂಸ್ಕಾರಃ |
| 11 | 53 | ಹಸ್ತಾ | ಹಸ್ತೌ |
| 12 | 7 | ಜಾನಾಬಿ | ಜಾನುಬಿ |
| 13 | 1 | ಲೇಖ್ಯಂ | ಲೇಖಂ |
| 14 | 5 | ಪಿತಿನಾ | ವೀತಿನಾ |
| 15 | 28 | ವಲ್ಲನೆ | ವಲ್ಲದೆ |
| 16 | 8 | ವ್ಯಾಪಿ | ವಾಪಿ |
| 21 | 16 | ಸುಹ್ಮಾನದ | ಸುಷ್ಮಾನದ |
| 21 | 30 | ಕಾರ್ಯ | ಬಾರ್ಯಾ |

॥ ಶ್ರೀ ॥

# ಮುನ್ನುಡಿ

॥ ಶ್ರೀ ಗುರುರಾಜೋ ವಿಜಯತೇ ॥

ಸಮಸ್ತ ಆಸ್ತಿಕ ಜನತೆಯ ಉನ್ನತಿಯು ಧರ್ಮದಿಂದಲೇ ಆಗುವುದು. "ಧಾರಣಾದ್ಧರ್ಮ ಉಚ್ಯತೇ" "ಯತ್ ಸ್ಯಾತ್ ಧಾರಣ ಸಂಯುಕ್ತಂ ಸ ಧರ್ಮ ಇತಿ ಕೀರ್ತಿತಃ॥" ಇವೇ ಮುಂತಾದ ಪ್ರಮಾಣಗಳು, ಧರ್ಮದಿಂದಲೇ ಜಗದ ಜನಾಂಗದ ಶಾಂತಿ, ಸುವ್ಯವಸ್ಥಿತಿ, ಸುಖಗಳು ಎಂಬ ಅಂಶವನ್ನು ವಿಶದಪಡಿಸುವುವು.

"ವೇದೋಽಖಿಲೋ ಧರ್ಮ ಮೂಲಂ" "ವೇದ ಪ್ರಣಿಹಿತೋ ಧರ್ಮಃ". "ನ ಹಿ ಧರ್ಮಾದಿ ಸಿದ್ಧಿಃ ಸ್ಯಾತ್ । ನಿತ್ಯ ವಾಕ್ಯಂ ವಿನಾ ಕ್ವಚಿತ್" ಎಂಬ ಇವೇ ಮುಂತಾದ ಪ್ರಮಾಣಗಳು, ವೇದವೇ ಧರ್ಮಪ್ರಮಾಣವೆಂದು ಸಾರುತ್ತವೆ.

ವೈದಿಕ ಧರ್ಮದಲ್ಲಿ ಸ್ವ-ಸ್ವವರ್ಣಾಶ್ರಮೋಚಿತ ಕರ್ಮಾನುಷ್ಠಾನಗಳೂ ಮಹತ್ವದ ಸ್ಥಾನ ಪಡೆದಿವೆ. ಹಾಗೂ ಸಂಸ್ಕಾರಗಳ ಮಹತ್ವವೂ ಬಹಳವಾಗಿ ನಿರೂಪಿತವಾಗಿವೆ.

ಶ್ರೀ ಕೃಷ್ಣನೂ ಭಗವದ್ಗೀತೆಯಲ್ಲಿ—

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥

(ಭ. ಗೀ ೧೬-೨೩)

ಇತ್ಯಾದಿ ವಾಕ್ಯಗಳಿಂದ ಶಾಸ್ತ್ರಾನುಸಾರಿ ಆಚಾರ ಧರ್ಮಗಳನ್ನು ಸ್ಥಾಪಿಸಿದ್ದಾನೆ.

ಹೀಗಿರುವಾಗ – ಕಾಲಕರ್ಮದುರ್ವಿಪಾಕದಿಂದ ವೈದಿಕ ಧರ್ಮಾಚರಣೆಯು ಲೋಪದ ದಾರಿಯತ್ತ ಸಾಗಿದೆ. ಧಾರ್ಮಿಕರಿಗೆ ಜಿಜ್ಞಾಸುಗಳಿಗೆ ಎಷ್ಟೋ ವಿಷಯಗಳ ಬಗ್ಗೆ ಗಾಢಾಂಧಕಾರ ಬಂದೊದಗಿದೆ. ಇಂತಹ ವಿಷಮ ಪರಿಸ್ಥಿತಿಯಲ್ಲಿ ಶ್ರೀ ತಾಮ್ರಪರ್ಣಿ ವಂಶತಿಲಕರಾದ ಶ್ರೀ ಶ್ರೀನಿವಾಸಾಚಾರ್ಯರು ಈ ಒಂದು ಚಿಕ್ಕ ಪ್ರಬಂಧವನ್ನು ರಚಿಸಿದ್ದಾರೆ. ಇದರಲ್ಲಿ ವೈಧಿಕ ಧರ್ಮದ ಮಹತ್ವ, ವರ್ಣಾಶ್ರಮಾಚಾರದ ಅವಶ್ಯಕತೆ. ಸಂಸ್ಕಾರಗಳ ಪರಿಚಯ, ಅವುಗಳ ಮಹತ್ವ, ಮುಂತಾದ ವಿಷಯಗಳನ್ನು ಕೂಲಂಕುಶವಾಗಿ ಸಪ್ರಮಾಣವಾಗಿ ವಿಮರ್ಶಿಸಿ ನಿರೂಪಿಸಿರುತ್ತಾರೆ.

ವಿಶೇಷತಃ ಚೌಲೋಪನಯನಗಳಲ್ಲಿ ಅವಶ್ಯವೆನಿಸಿದ "ಶಿಖಾ" ವಿಷಯದಲ್ಲಿ ಋಗ್ವೇದ, ಯಜುರ್ವೇದ, ಬ್ರಾಹ್ಮಣ ವಾಕ್ಯಗಳನ್ನೂ, ಸ್ಮೃತಿ ವಾಕ್ಯಗಳನ್ನೂ ಉದಾಹರಿಸಿ ಅವುಗಳ ಬಗ್ಗೆ ಆದರ-ವಿಶ್ವಾಸ ಹುಟ್ಟುವ ಹಾಗೆ ಬರೆದಿರುತ್ತಾರೆ.

॥ ಶ್ರೀಃ ॥

॥ ಓಂ ಶಿಖಾಯೈ ವೌಷಟ್ ॥

# ಶಿಖಾ

# ॥ ಸದ್ಬ್ರಾಹ್ಮಣ ಲಕ್ಷಣಂ ॥


ಲೇಖಕರು :

**ಪಂ. ಶ್ರೀನಿವಾಸಾಚಾರ್ಯ ತಾಮ್ರಪರ್ಣಿ**



**ಶ್ರೀ ವ್ಯಾಸದಾಸ ತಂತ್ರ ಪ್ರತಿಷ್ಠಾನಂ**
**(ವ್ಯಾಸ ಸಾಹಿತ್ಯ ದಾಸ ಸಾಹಿತ್ಯ [illegible])**
**ನಂ. 36, 5ನೇ ಮುಖ್ಯ ರಸ್ತೆ, ಚಾಮರಾಜಪೇಟೆ,**
**ಬೆಂಗಳೂರು – 560 018.**
**ವಿದ್ವಾನ್: ಎ. ಧೀರೇಂದ್ರಾಚಾರ್, M.A.**

ಪ್ರಕಾಶಕರು :

ಶ್ರೀ ವ್ಯಾಸದಾಸ ತಂತ್ರ ಪ್ರತಿಷ್ಠಾನ

ನಂ. 36, 5ನೇ ಮುಖ್ಯರಸ್ತೆ, ಚಾಮರಾಜಪೇಟೆ

ಬೆಂಗಳೂರು

ವಿಮರ್ಶಕರಿಗೆ, ಜಿಜ್ಞಾಸುಗಳಿಗೆ ಇದೊಂದು ಪ್ರಮಾಣ ಪರಿಚಯವಾಗಿದೆ. ಗುಣಗ್ರಾಹಿಗಳು ಇದರ ಸುಲಾಭ ಪಡೆಯುವುದರಲ್ಲಿ ಸಂದೇಹವಿಲ್ಲ.

ಶ್ರೀ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರು ಚಿಕ್ಕ ವಯಸ್ಸಿನವರಾದರೂ ಪ್ರೌಢ ಮತಿಗಳಿಗೆ ಆನಂದಕಾರಕವಾದ ಈ ಪ್ರಬಂಧವನ್ನು ಬರೆದು, ವೈದಿಕರಿಗೆಲ್ಲಾ ಪರಮ ಉಪಕಾರ ಹಾಗೂ ಸಂತಸವನ್ನುಂಟುಮಾಡಿದ್ದಾರೆ.

ಶ್ರೀ ಹರಿವಾಯು ಗುರುಗಳು ಇವರಿಗೆ ಸುದೀರ್ಘ ಆಯುರಾರೋಗ್ಯಾದಿ ಭಾಗ್ಯಗಳನ್ನಿತ್ತು ಇವರಿಂದ ಇನ್ನೂ ಹೆಚ್ಚಿನ ಗ್ರಂಥಗಳು ಹೊರಬರುವಂತೆ ಅನುಗ್ರಹಿಸಲಿ ಎಂದು ನಮ್ಮ ಉಪಾಸ್ಯ ಶ್ರೀ ಹರಿಯಲ್ಲಿ ಪ್ರಾರ್ಥಿಸುತ್ತೇವೆ.

ಜಾಲಿಹಾಳ ಕೇಶವಾಚಾರ್ಯ,

ಪ್ರಭವ ಸಂವತ್ಸರ
ಅಗ್ರಹಾರ
ಗದಗ
ಆಷಾಢ ಬ. ಪಂಚಮಿ
ತಾ|| ೧೫-೭-೧೯೮೭

॥ ಶ್ರೀ ॥

॥ ಇದಂ ಆರ್ಯಸಮ್ಮತಂ ॥

॥ ಶ್ರೀ ಗುರುರಾಜೋ ವಿಜಯತೇ ॥

"ಸರ್ವಾಃ ಕ್ರಿಯಾಃ ಹರೌಭಕ್ತೇ ಹರಿಭಕ್ತೈಃ ಸ್ವನುಷ್ಠಿತಾಃ ।
ಗುರುಭಕ್ತೈಃ ಸದಾಚಾರೈಃ ಫಲಂತ್ಯದ್ಧಾ ನ ಚಾನ್ಯಥಾ ॥"

ಇದು ಶ್ರೀ ಮಧ್ವಾಚಾರ್ಯರ ಆದೇಶ. ವಿಷ್ಣು-ವೈಷ್ಣವರಲ್ಲಿ ಭಕ್ತಿವುಳ್ಳವರೂ, ಗುರುಭಕ್ತರೂ ಹಾಗೂ ಸದಾಚಾರ ಉಳ್ಳವರಿಂದ ಅನುಷ್ಠಿತವಾದ ಸತ್ಕರ್ಮಗಳು ಮಾತ್ರ ಫಲಿಸುತ್ತವೆ. ಅನ್ಯಥಾ ಫಲಿಸುವುದಿಲ್ಲ ಎಂದು ತಿಳಿಸಿದ್ದಾರೆ. ಇಲ್ಲಿ "ಸದಾಚಾರ" ಎಂಬ ಪದದ ಅರ್ಥವು ಒಳಗಿನ ಹಾಗೂ ಹೊರಗಿನದ್ದಾದ ಶಾರೀರಿಕ ಸತ್ಸಂಸ್ಕಾರಗಳನ್ನೂ ಒಳಗೊಂಡಿದೆ. ಅನೇಕ ವಿಧವಾದ ಶಾರೀರಿಕ ಸುಸಂಸ್ಕಾರಗಳ ಮಧ್ಯದಲ್ಲಿ ಯಾವ ಚ್ಛರೀರ ಉಳಿಸಿಕೊಳ್ಳಬೇಕಾದ ಹಾಗೂ ಸ್ಪಷ್ಟ ಎದ್ದು ಕಾಣುವ ಭಗವದಾಜ್ಞಾಪಾಲನ ರೂಪವಾದ ವೇದ-ವೈದಿಕ ಚಿಹ್ನೆ ಎಂದರೆ "ಶಿಖಾಧಾರಣ". ಇದರಿಂದ ರಹಿತವಾದ ಸತ್ಕರ್ಮ ಅನುಷ್ಠಾನವು ಎಂದೂ ಫಲಿಸುವುದಿಲ್ಲ. ಇದನ್ನೇ—

"ರಿಕ್ತೋ ವಾ ಏಷೊ ನಪಿಹಿತಃ ಯನ್ಮುಂಡಸ್ತಸ್ಯೈ
ತದಪಿಧಾನಂ ಯಚ್ಛಿಖಾ"

ಎಂಬ ಶ್ರುತಿ ವಾಕ್ಯವೂ ಹೇಳುತ್ತದೆ. ತಲೆಯ ಮೇಲೆ ಆಚ್ಛಾದನಾ ರಹಿತನಾದವನು ಫಲರಹಿತನಾಗುತ್ತಾನೆ. (ರಿಕ್ತಃ) ಶಿರಸ್ಸಿನ ಆಚ್ಛಾದನೆಯೇ "ಶಿಖಾ" ಎಂದು ಅಭಿಪ್ರಾಯ. ಈ ಶ್ರುತಿಯ ಶಿಖಾ ಶಬ್ದದ ಬಗ್ಗೆ ಆಪಸ್ತಂಬರು ಹೀಗೆ ಹೇಳಿದ್ದಾರೆ.

"ತೂಷ್ಣೀಂ ಕೇಶಾನ್ ವಿನೀಯ ಯಥರ್ಷಿ ಶಿಖಾ ನಿದಧಾತಿ
ಪ್ರತಿದಿಶಂ ಪ್ರವಪತಿ ।
ಯಥರ್ಷಿ ಪ್ರವರ ಸಂಖ್ಯಯಾ ತಾಸಾಂ ಮಧ್ಯ ಶಿಖಾ
ವರ್ಜನಂ ಉಪನಯನೇ ವಪನಂ ಕಾರ್ಯಂ ॥" ಎಂದು.

ಶಿರಸ್ಸಿನ ಮಧ್ಯ ಶಿಖಾವನ್ನು ಉಳಿಸಿಕೊಂಡು "ಪ್ರತಿದಿಶಂ" ಎಂದರೆ ತಲೆಯ ಸುತ್ತಲೂ ವಪನ (ಮುಂಡನ) ಮಾಡಿಸಬೇಕು. ಋಷಿ ಪ್ರವರ ಸಂಖ್ಯೆಗೆ ಅನುಗುಣವಾಗಿ ಹೆಚ್ಚಿನ ಶಿಖಾವನ್ನು ಬಿಡಬಹುದಾದರೂ ಮಧ್ಯ ಶಿಖಾಧಾರಣ ಸರ್ವ ಋಷಿ ಪ್ರವರ ಸಂಪ್ರದಾಯ ಸಮ್ಮತ.

ಇದೇ ಈಗಿನ ಪ್ರಚಲಿತ ಧಾರಣಕ್ರಮ ಉಳಿದಿದೆ. ಇಂತಹ ಶಿಖಾಧಾರಣ ವಿಷಯ ಸೂರ್ಯಪ್ರಕಾಶದಷ್ಟು ನಿತ್ಯಸತ್ಯವೆಂದು ಎಲ್ಲರ ವಂಶಪಾರಂಪರ್ಯದಲ್ಲಿ ಅಬಾಧಿತ ಅನುಷ್ಠಾನದಲ್ಲಿ ಬಂದಿದೆ. ಆದರೆ ಕಾಲಪ್ರವಾಹದಲ್ಲಿ ಪ್ರಮಾಣಗ್ರಂಥಗಳ ಅನಭ್ಯಾಸ, ಅನುಪಲಬ್ಧಿ, ಅರ್ಥೈಸುವ ಪಾಠ-ಪ್ರವಚನಾದಿಗಳ ಅಭಾವಗಳಿಂದ

ಅಯೋಗ್ಯ ಜನರು ಪ್ರಾಮಾಣಿಕ ವಿಷಯವನ್ನೂ ಮೂದಲಿಸುತ್ತಾರೆ. ಇಂತಹ ಕುವಾದವನ್ನು ತಡೆದು, ಅನುಷ್ಠಾನದ ಪ್ರಾಮಾಣ್ಯವನ್ನು ಮನವರಿಕೆ ಮಾಡಲು ಬೇಕಾಗಿರುವ ಅನೇಕ ಗ್ರಂಥಗಳಲ್ಲಿ "ಶಿಖಾ ಸದ್ಬ್ರಾಹ್ಮಣ ಲಕ್ಷಣಮ್" ಎಂಬುವುದೂ ಒಂದು.

ಸ್ವೇಚ್ಛಾಚಾರದಲ್ಲಿ ವಿಜೃಂಭಿಸುತ್ತಿರುವ ತನ್ನ ಸ್ವೇಚ್ಛೆಗೆ ಪೋಷಕವಾದ ಮಾರಕವಾಗದ ಆಚಾರಾಂಶದಲ್ಲಿ ಮಾತ್ರ ವಿಶ್ವಾಸವನ್ನು ಸೂಚಿಸಿ ಉಳಿದ ಸದಾಚಾರ ಭಾಗವನ್ನು "ಗೊಡ್ಡಾಚಾರ" ಎಂದು ಅವಹೇಳನ ಮಾಡುತ್ತಿರುವ ಈಗಿನ ಜನ ಮಧ್ಯದಲ್ಲಿ ಬೆಳಕಿಗೆ ಬರುತ್ತಿರುವ ಈ ಕೃತಿ "ಮುಳ್ಳು ಗಿಡದಲ್ಲಿ ಮಿನುಗುವ ಜಾತಿ ಕುಸುಮ"ವಾಗಿದೆ. ಗೋಪ್ಯವಾಗಿ ನಡೆಸುವ ಸದಾಚಾರಗಳನ್ನು ಪ್ರೀತಿಸಿ ಬಾಹ್ಯ ಲಕ್ಷಣಗಳಾದ ಶಿಖಾ ನಾಮಧಾರಣ, ವೇಷ-ಭೂಷಣಾದಿಗಳನ್ನು ನಿಂದಿಸುವ ರೀತಿ-ನೀತಿಗಳು ಅರ್ಧಜರತೀಯಗಳಾಗುತ್ತವೆ. ಇದನ್ನು ಈ ಕೃತಿ ಸ್ಪಷ್ಟಪಡಿಸುತ್ತದೆ.

ಶಿಖಾಧಾರಣೆ ವಿಷಯದಲ್ಲಿ ಅನೇಕ ವಿವಾದಗಳು :—ಪ್ರಮಾಣವಿಲ್ಲವೆಂದೂ, ಇದ್ದರೂ ಲಕ್ಷಣ ಹೇಳಲು ಬರುವುದಿಲ್ಲವೆಂದೂ, ಹೇಳಿದರೂ ಧರಿಸಿದ್ದೆಲ್ಲಾ ಶಿಖಾ ಎಂದೂ, ನಿತ್ಯಧಾರ್ಯವಲ್ಲವೆಂದೂ, ಧರಿಸಿದರೂ ಗೋಪ್ಯವಾಗಿ ಸ್ವಲ್ಪ ಶಿಖಾ ಇಟ್ಟು ಮುಂದೆ ಲಾವಣ್ಯಕೇಶ ಧರಿಸಬಹುದೆಂದೂ, ಅದೂ ಸ್ವತಃ ಮಾಡಿಕೊಳ್ಳಬಹುದೆಂದೂ (self shaving) ಇತ್ಯಾದಿ....ಇತ್ಯಾದಿ....

ಇವುಗಳಿಗೆ ಸಮರ್ಪಕ ಉತ್ತರ ಕೊಟ್ಟು ಶಿಖಾಧಾರಣ ಪ್ರಮಾಣ, ಲಕ್ಷಣ, ಪರಿಮಾಣ, ನಿತ್ಯಧಾರಣ, ಸಕ್ರಮಾಕ್ರಮಗಳ ವಿಚಾರ, ಸಾವಕಾಶ-ನಿರವಕಾಶ, ಚಿಂತಾ, ಅಪವಾದ ವಿಚಾರ, ಫಲಾಫಲಗಳ ಚಿಂತಾ ಮತ್ತು ಮೋಕ್ಷಾಂಗತ್ವಾದಿಗಳನ್ನು ಸಮರ್ಪಕ ರೀತಿಯಲ್ಲಿ ಬಹು ಗ್ರಂಥಗಳ ಉದಾಹರಣದೊಂದಿಗೆ ತಿಳಿಸುವ ಈ ಗ್ರಂಥ ಸರ್ವತೋಮುಖ ಸುಂದರ ಕೃತಿ. ಈ ಪ್ರಮಾಣ ಸಂಗ್ರಹಣ ಹಾಗೂ ಸಮರ್ಪಕ ಸಂಯೋಜನೆ ನಡೆಸಿದ ಶ್ರೀ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರು ನಿಜವಾಗಿ ಶ್ಲಾಘ್ಯರು. ಇದರಂತೆ ಇನ್ನೂ ಅನೇಕ ಕೃತಿರತ್ನಗಳಿಗೆ ಇವರು ರತ್ನಾಕರರಾಗಲೆಂದು ಆಶಿಸುತ್ತಾ ಗುಣಾರ್ಣವನಾದ ಶ್ರೀಮನ್ನಾರಾಯಣನಲ್ಲಿ ಹಾಗೂ ಗುರು-ಹಿರಿಯರಲ್ಲಿ ಪ್ರಾರ್ಥಿಸುತ್ತೇನೆ.

ಬಾಳಗಾರು ಶ್ರೀನಿವಾಸಾಚಾರ್ಯ
ಬೆಂಗಳೂರು

|| ಶ್ರೀ ||

# ಪ್ರಕಾಶಕರ ನುಡಿ

ಧಾರ್ಮಿಕ ಪ್ರಪಂಚದ ಸಾಂಪ್ರದಾಯಿಕ ರೀತಿಗಳು ಯಾವುದಾದರೊಂದು ಶಾಬ್ದಿಕ ಪ್ರಮಾಣವನ್ನಾಧರಿಸಿರುವುದೆಂಬುದು ಸರ್ವವಿದಿತ. ಆದರೂ ನಮ್ಮ ಪೂರ್ವಿಕರ ವೇಷ-ಭೂಷಣಗಳಲ್ಲಿ ಒಂದಾದ ಶಿಖಾವನ್ನು ಧರಿಸುವುದಕ್ಕೆ ಉಪಲಬ್ಧವಿರುವ ಪ್ರಮಾಣಗಳ ವೇತ್ತೃಗಳು ಇತ್ತೀಚೆಗೆ ಬಹು ಅಲ್ಪವಾಗಿರುವುದು ಗಮನಾರ್ಹವಾಗಿದೆ.

ಶಿಖಾ ವಿಷಯದಲ್ಲಿ, ಧರ್ಮಗ್ರಂಥಗಳಲ್ಲಿ ಪ್ರಮಾಣವಿದ್ದರೂ ಒತ್ತೊಟ್ಟಿಗೆ ಎಲ್ಲವನ್ನೂ ತಿಳಿಸುವ ಗ್ರಂಥದ ಅವಶ್ಯಕತೆಯಿದ್ದಿದ್ದರಿಂದ ಅದನ್ನು ಪೂರೈಸಲು ಪಂ|| ಶ್ರೀ|| ಶ್ರೀನಿವಾಸಚಾರ್ಯ ತಾಮ್ರಪರ್ಣಿ ಅವರ ಪ್ರಮಾಣ ಸಂಗ್ರಹಾತ್ಮಕವಾದ ಈ ಉತ್ತಮ ಕಿರು ಕೃತಿಯನ್ನು ಪ್ರಕಾಶಿಸಲು ಹರ್ಷಿಸುತ್ತೇವೆ.

ಈ ವಿಷಯದಲ್ಲಿ ವೈದಿಕ ಪ್ರಮಾಣವಷ್ಟೇ ಅಲ್ಲದೇ ಪಾಶ್ಚಾತ್ಯರ ಅನುಮೋದನೆ, ಪುಷ್ಟಿಪೋಷಣಗಳೂ ಸಹ ಬಹಳವಿವೆ. ಗ್ರಂಥಗೌರವ ದೃಷ್ಟಿಯಿಂದ ಅವುಗಳನ್ನು ಬಿಟ್ಟು ಕೇವಲ ಧರ್ಮಶಾಸ್ತ್ರ ಪ್ರಮಾಣವನ್ನುದಾಹರಿಸಿರುವ ಈ ಗ್ರಂಥದಲ್ಲಿ ದೃಢ ನಿಲುವಿಲ್ಲದ ಪಾಶ್ಚಾತ್ಯರ ಮಾತುಗಳನ್ನು ಸೇರಿಸಿಲ್ಲ.

ಈ ಹೊತ್ತಿಗೆಯ ಬಿಡುಗಡೆಗೆ ಸಹಾಯ ಮಾಡಿದ ನಮ್ಮ ಆತ್ಮೀಯರಾದ ಆಸ್ತಿಕ ಭಗವದ್ಭಕ್ತರೆಲ್ಲರಿಗೂ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಹರಿಯು ಆಯುರಾರೋಗ್ಯ ಐಶ್ವರ್ಯಾದಿಗಳನ್ನಿತ್ತು ಉತ್ತರೋತ್ತರ ಶ್ರೇಯಸ್ಸನ್ನುಂಟುಮಾಡಲಿ ಎಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥಕ್ಕೆ ಮುನ್ನುಡಿಯನ್ನು ಅನುಗ್ರಹಿಸಿದ ಪರಮಪೂಜ್ಯ ಪಂ|| ಶ್ರೀ ಜಾಲಿಹಾಳ ಕೇಶವಾಚಾರ್ಯರಿಗೆ ನಮ್ಮ ಹೃತ್ಪೂರ್ವಕ ಶಿರಸ್ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇವೆ. ಶ್ರೀ|| ಪಂ|| ಪೂಜ್ಯ ಶ್ರೀನಿವಾಸಾಚಾರ್ಯ ಬಾಳಗಾರ ಅವರು ಈ ಗ್ರಂಥಕ್ಕೆ ಶುಭ ಆಶಿಸಿ ತಮ್ಮ ಒಂದು ಸದಭಿಪ್ರಾಯವನ್ನು ಅನುಗ್ರಹಿಸಿದ್ದಾರೆ. ಅವರಿಗೆ ನಮ್ಮ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಈ ಕೃತಿಯನ್ನು ಸಂಗ್ರಹಿಸಿ ಕೊಟ್ಟಿರುವ ಶ್ರೀ|| ಪಂ|| ತಾಮ್ರಪರ್ಣಿ ಶ್ರೀನಿವಾಸಾಚಾರ್ಯರಿಗೆ ನಮ್ಮ ಅನಂತ ನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಪ್ರಕಾಶಕರು :

ಎ. ಧೀರೇಂದ್ರಾಚಾರ್

ಶ್ರೀ ವ್ಯಾಸದಾಸ ತಂತ್ರ ಪ್ರತಿಷ್ಠಾನ

॥ ಶ್ರೀ ॥

# ಲೇಖಕರ ವಾಣಿ

ನಿಖಿಲ ಕಲ್ಯಾಣಗುಣಮಂಡಿತ ಶ್ರೀಮನ್ನಾರಾಯಣನ ಆಜ್ಞೆಯಿಂದ ಧರ್ಮ, ಪರಾಪರತತ್ವ ಶಾಸ್ತ್ರಜ್ಞಾನದ ಪುನರುಜ್ಜೀವನಕ್ಕಾಗಿ ಈ ಘೋರ ಕಲಿಯುಗದಲ್ಲಿ ಅವತರಿಸಿದ ಶ್ರೀ ಮುಖ್ಯಪ್ರಾಣದೇವರಾದ ಶ್ರೀ ಮದಾನಂದತೀರ್ಥರು ೩೭ ಅತ್ಯಮೂಲ್ಯ ಗ್ರಂಥಗಳನ್ನು ರಚಿಸಿ, ಸೂತ್ರ, ಪುರಾಣ, ಗೀತಾ, ಆಚಾರ, ತಂತ್ರ, ತತ್ವ, ಉಪನಿಷತ್ಪ್ರಸ್ಥಾನಗಳಲ್ಲಿ ತಮ್ಮ ದೃಢ ನಿರ್ಣಯವನ್ನು ಅನುಗ್ರಹಿಸಿದ್ದಾರೆಂಬುದು ಜಗತ್ತಿಗೆ ಹೊಸ ವಿಷಯವೇನಲ್ಲ.

ಪ್ರಕೃತ ಸದಾಚಾರದ ಅಂತರ್ಭೂತವಾದ ಶಿಖಾಧಾರಣೆಯನ್ನು, ಶ್ರೀ ಮದಾಚಾರ್ಯರು ಯಾವ ಸಂದರ್ಭದಲ್ಲಿಯೂ ಆಗ್ರಹಪೂರ್ವಕವಾಗಿ ಸ್ಪಷ್ಟ ವಾಕ್ಯಗಳಿಂದ ತಿಳಿಸದಿರುವುದು ಒಂದು ಮಹಾಪ್ರಶ್ನೆಯೇ ಆಗಿದೆ. ಸಜ್ಜನ ಹೃದಯದಲ್ಲಿ ಕಾಲುಷ್ಯ ತುಂಬುವ ವಿವಾದಾಸ್ಪದ ವಿಷಯದಲ್ಲಿ, ಅದನ್ನು ಖಂಡಿಸಿ ಸಾತ್ವಿಕರಿಗೆ ಯಥಾರ್ಥ ಬೋಧೆಯನ್ನುಂಟು ಮಾಡುವ ನಿರ್ಣಯಾಚಾರ್ಯರು, ಇದರಂತೇ ಸರ್ವಾಂಗೀಕೃತ, ನಿರ್ವಿವಾದ ಅನೇಕ ಪ್ರಮೇಯಗಳಲ್ಲಿ ಉದಾಸೀನ ಭಾವನೆಯನ್ನು ತಾಳಿದ್ದಾರೆ. ಇದಕ್ಕೆ ಕಾರಣ, ಆ ವಿಷಯಗಳಲ್ಲಿರುವ ಅವಿಪ್ರತಿಪತ್ತಿಯೇ ಹೊರತು, ಅವು ಅಪ್ರಧಾನ, ಅನವಶ್ಯಕವೆಂದಲ್ಲ.

ಸಮಗ್ರಭಾರತ ಭೂಮಿಯಲ್ಲಿ, ಶ್ರೀ ಮನ್ಮಧ್ವಮತದ ಜಯಭೇರಿಯನ್ನು ಮೊಳಗಿಸಿದ, ಅಭಿನವ ಆನಂದತೀರ್ಥರೆಂದು ಪ್ರಖ್ಯಾತರಾದ ೧೦೦೮ ಶ್ರೀ ಶ್ರೀಮತ್ಸತ್ಯಧ್ಯಾನತೀರ್ಥರ ಪ್ರಿಯ ಶಿಷ್ಯರೂ, ಶ್ರೀಸಾತ್ವಿಕ ಗುರುರಾಜಾಚಾರ್ಯರ ತನೂಜರೂ ಆದ ನನ್ನ ಪೂಜ್ಯ ಗುರುಗಳೂ ಆದ ಪಂಡಿತರಾಜ ಜಾಲಿಹಾಳ ಶ್ರೀನಿವಾಸಾಚಾರ್ಯರು ಪ್ರಾಸಂಗಿಕವಾಗಿ ತಮ್ಮ ಬೋಧನೆಯಲ್ಲಿ ತಿಳಿದುಬಂದ ಸೂಕ್ಷ್ಮ ಧರ್ಮ ಪ್ರಮೇಯಗಳಲ್ಲಿ ಕೆಲವು ವಿಷಯಗಳ ಅಡಕಪಾತ್ರೆಯೇ ಈ ಕಿರು ಕೃತಿ.

ಮೋಕ್ಷ ಸಾಧನವಾದ ಸಜ್ಞಾನ, ಸದಾಚಾರಗಳನ್ನುಪದೇಶಿಸಿ ಅನುಗ್ರಹಿಸಿದ ಶ್ರೀ ಆಚಾರ್ಯರನ್ನೂ, ಅಶನ-ವಸನವಿತ್ತು, ರೋಗಾದಿ ಪೀಡೆಯನ್ನು ಪರಿಹರಿಸಿ, ಆಶೀರ್ವದಿಸಿದ ನನ್ನ ಆಚಾರ್ಯಾಣಿ (ವೈನಿ)ಯವರನ್ನೂ, ಜನ್ಮವಿತ್ತು, ಜ್ಞಾನೋಪದೇಶ ಕೊಟ್ಟು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಿದ ನನ್ನ ಪೂಜ್ಯ ಮಾತಾ-ಪಿತೃಗಳಾದ ಹಾ|ಕುಂ|ಸೌ|| ಸತ್ಯವತಿಬಾಯಿ ಮತ್ತು ಶ್ರೀ ಶೇಷಗಿರೀಶಾಚಾರ್ಯರನ್ನೂ, ಕೃತಜ್ಞತೆಯಿಂದ ವಂದಿಸಿ ವಿರಮಿಸುತ್ತೇನೆ.

ಶ್ರೀನಿವಾಸಾಚಾರ್ಯ
ತಾಮ್ರಪರ್ಣಿ.

## ಲೇಖಕರ ಗುರುವರ್ಯ ದಂಪತಿಗಳು

# ಪಂಡಿತರಾಜ ಪೂಜ್ಯ ಜಾಲಿಹಾಳ ಶ್ರೀನಿವಾಸಾಚಾರ್ಯ ದಂಪತಿಗಳು



ಶ್ರೀ ಶ್ರೀನಿವಾಸ ಗುರು ಸದ್ಹೃದಯಾಂತರಸ್ಥ । ಶ್ರೀ ಮಧ್ವಪತ್ ಸರಸಿಜೇ ಕೃತ ವಾಸ ಭೂಮೇಃ ॥ ಶ್ರೀ ಭರ್ತುರಾಶ್ರಿತ ಜನಾಮಿತ ಪಾಪಹರ್ತುಃ। ಶ್ರೀ ಸೇವಿತೆ ಕೃತಿಮಿಮಾಂ ಚರಣೇರ್ಪಯೇಽಹಂ ॥

॥ ಶ್ರೀ ॥

# ಶಿಖಾ ಸದ್ಬ್ರಾಹ್ಮಣ ಲಕ್ಷಣಂ

॥ ಶ್ರೀ ಗುರುಭ್ಯೋನಮಃ ಶ್ರೀಮನ್ಮಹಾಗಣಪತಯೇ ನಮಃ ॥
ಶ್ರೀ ಮದ್ಧನು ಮದ್ಭೀಮ ಮಧ್ವಾಂತರ್ಗತ ಶ್ರೀ ರಾಮಕೃಷ್ಣವೇದವ್ಯಾಸಾತ್ಮಕ
ಶ್ರೀ ಲಕ್ಷ್ಮೀ ಹಯಗ್ರೀವಾಯ ನಮಃ

॥ ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।
ಗುರುಶ್ಚ ಮಧ್ವನಾಮಾ ಮೇ ವರದೋಸ್ತು ನಿರಂತರಮ್ ॥

ಸಂಪ್ರದಾಯ ಮತ್ತು ತದ್ಬೋಧಕಗಳು :

ಪುಣ್ಯಕರ ಕರ್ಮಸ್ಥಾನವಾದ ಆಸೇತು ಹಿಮಾಚಲಾಖ್ಯ ಭಾರತ ಭೂಮಿಯಲ್ಲಿ ಪವಿತ್ರವಾದ ನಾನಾ ಸಂಪ್ರದಾಯಗಳು, ಪದ್ಧತಿಗಳು, ಆಚಾರ ವಿಚಾರಗಳು ನಾನಾ ಸಂಸ್ಕೃತಿಗಳು ಪ್ರಾಚೀನ ಸಂಪ್ರದಾಯ ಪ್ರವರ್ತಕರಾದ ಮಹಾಋಷಿಗಳಿಂದ ಉದ್ಭವಿಸಿ, ನಾನಾ ಪ್ರಕಾರಗಳಿಂದ ವೃದ್ಧಿಗೊಂಡು, ತದ್ವಾರಾ ಮುಮುಕ್ಷುಗಳಿಗೆ ಸಾಧನೀಭೂತ, ಜ್ಞಾನಾರ್ಜನ, ಕರ್ಮಾನುಷ್ಠಾನ ಮೊದಲಾದುವುಗಳಿಗೆ ಬಹುಅನುಕೂಲವನ್ನು ಉಂಟು ಮಾಡಿವೆ ಎಂಬುದರಲ್ಲಿ ತದನುಷ್ಠಾನ ತತ್ಪರರಾದ ಸಾಧಕರೇ ಸಾಕ್ಷಿಯಾಗಿರುತ್ತಾರೆ. ಇದನ್ನನುಸರಿಸಿಯೇ ವೇದಗಳು, ವೇದಾಂತ ಸೂತ್ರಗಳು, ಭಾರತ ರೂಪವಾದ ಇತಿಹಾಸ, ಅನೇಕ ಪುರಾಣಗಳು, ಉಪಪುರಾಣಗಳು, ಧರ್ಮಶಾಸ್ತ್ರ ಪ್ರತಿಪಾದಕ ಸ್ಮೃತಿಗಳು, ನೀತಿಬೋಧಕ ಆಖ್ಯಾನಗಳು, ಗೃಹ್ಯಸೂತ್ರಗಳು, ಕಲ್ಪ ಸೂತ್ರಗಳು, ಅರ್ಥಶಾಸ್ತ್ರ ಗ್ರಂಥಗಳು, ಜ್ಯೋತಿಷ್ಯ ಕೃತಿಗಳು, ಶಾಬ್ದಿಕ ಪ್ರಪಂಚದಲ್ಲಿ ಸುಲಭೋಪಾಯ ಕಲ್ಪಕಗಳಾದ ವ್ಯಾಕರಣ ಸೂತ್ರಗಳು, ಈ ವಿಧವಾಗಿ ರಚಿತವಾದ ಸೂತ್ರಗಳಿಗೆ ವೃತ್ತಿಗಳು, ವಾರ್ತಿಕಗಳು, ಭಾಷ್ಯಗಳು, ಭಾಷ್ಯ ವ್ಯಾಖ್ಯಾನಗಳು, ಮೀಮಾಂಸಾ ಸೂತ್ರಗಳು, ಯೋಗ ಸೂತ್ರಗಳು ವೈದ್ಯಶಾಸ್ತ್ರ ಗ್ರಂಥಗಳು, ನ್ಯಾಯಶಾಸ್ತ್ರ ಗ್ರಂಥಗಳು ಇತ್ಯಾದಿ ಇತ್ಯಾದಿಗಳ ರಚನೆ, ಅಧ್ಯಯನ, ಪಾಠ, ಪ್ರವಚನ, ಅನುಷ್ಠಾನ, ಮೊದಲಾದವು ಪ್ರವೃತ್ತವಾಗಿವೆ.

ವೇದ–ವೈಧಿಕರು–ಮತ :

ಭಾರತೀಯರಾದ ಹಿಂದೂಗಳಿಗೆ ಈ ಎಲ್ಲಾ ಶಾಸ್ತ್ರಗಳಿಗೂ ಏಕೈಕ ಆಕರವಾಪುದೆಂದರೆ ಅಪೌರುಷೇಯವಾದ ವೇದಗಳು. ಶಾಸ್ತ್ರಕಾರರಲ್ಲಿ ಕೆಲವರು ವೇದವು ಈಶ್ವರ ರಚಿತವಾದ್ದರಿಂದ ಪೌರುಷೇಯವೆಂದೂ, ಇನ್ನುಳಿದವರು ಅಪೌರುಷೇಯವೆಂದೂ ಭಿನ್ನಾಭಿಪ್ರಾಯ ಹೊಂದಿದ್ದರೂ ಪ್ರಾಮಾಣ್ಯ ವಿಷಯದಲ್ಲಿ ಯಾರಿಗೂ ಅಭಿಪ್ರಾಯ ಭೇಧವಿಲ್ಲ. ಹೀಗೆ ವೇದಗಳಿಗೆ ಪರಮೋನ್ನತ ಸ್ಥಾನಮಾನವನ್ನು ಕೊಟ್ಟು ತದನುಸಾರಿಯಾದ ಸ್ಮೃತಿ ಪುರಾಣಗಳನ್ನೂ ಪ್ರಮಾಣೀಕರಿಸಿ ವೇದಗಳಿಗೆ ಸಮ್ಮತವಾದ ಮತವೇ ವೈದಿಕ ಮತ ಎಂದು ಕರೆಸಿಕೊಳ್ಳುವುದು.

ಈ ವೈದಿಕ ಮತಗಳು ತಮ್ಮ ತಮ್ಮ ತಾತ್ವಿಕ ಪ್ರಕ್ರಿಯೆಗಳಿಗೆ ಅನುಸಾರಿಯಾದ ಆಚಾರ, ಅನುಷ್ಠಾನ, ನೀತಿ, ನಿಯಮಗಳನ್ನು ನಿರೂಪಿಸಿಕೊಂಡಿವೆ. ತತ್ವಜ್ಞಾನ, ತದನುಗುಣ ಆಚಾರ, ತದನುವರ್ತನ, ಲೋಕನೀತಿ, ಆಧ್ಯಾತ್ಮಿಕ ನಿಯಮ ಧರ್ಮಕರ್ಮ ಪ್ರವೃತ್ತಿ ಇವೇ ಮೊದಲಾದುವುಗಳನ್ನು ದುಃಖ ಭೂಯಿಷ್ಠ ಸಂಸಾರದಿಂದ ಬಿಡುಗಡೆಗೆ ಸಾಧನಗಳನ್ನಾಗಿ ಸಾರುತ್ತಲಿರುವವು ಸಾಧನೀಭೂತ ತಾದೃಶ ನಿಯಮಗಳ ಪಾಲನೆಯಿಲ್ಲದೆ ಯಾರಿಗೂ ಮೋಕ್ಷವು ಅಸಂಭಾವಿತ" ಎಂದೂ ಅಭಿಪ್ರಾಯ ಪಟ್ಟಿವೆ. ಆದರಲ್ಲೂ ವೈದಿಕ ಮತವೆಂದು ಪ್ರಸಿದ್ಧವಾದವುಗಳಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ನೈಯಾಯಿಕ, ವೈಶೇಶಿಕ ಮತ್ತು ಮಿಮಾಂಸಕಮತ ಇವೇ ಮೊದಲಾದವು ಮುಖ್ಯವಾದವು.

ಧರ್ಮ ಪ್ರಮಾಣಗಳು :

ಈ ಎಲ್ಲಾ ಮತಗಳಲ್ಲಿಯೂ ಪರಸ್ಪರ ತತ್ಪ್ರಕ್ರಿಯಾ ವಿಷ್ಯದಲ್ಲಿ ಪ್ರಬಲವಾದ ವಿವಾದ ವಿರೋಧಗಳಿದ್ದರೂ ಧರ್ಮಕರ್ಮಗಳಲ್ಲಿಯೂ ಪ್ರಾಯಃ ಏಕಾಭಿಪ್ರಾಯವಿರುತ್ತದೆ. ಯಜ್ಞ, ಯಾಗ, ವರ್ಣಾಶ್ರಮ ಧರ್ಮ, ಸಂಸ್ಕಾರ, ವೇಷಭೂಷಣಗಳೇ ಮೊದಲಾದುವುಗಳಲ್ಲಿಯಂತೂ ಏಕ ರೀತಿಯ ಕ್ರಮಾನುಸಾರಿಯಾಗಿವೆ. ಎಲ್ಲರಲ್ಲಿಯೂ ಬ್ರಾಹ್ಮಣ್ಯ ರಕ್ಷಣೆ, ಸ್ನಾನ, ಸಂಧ್ಯಾವಂದಾನಾದಿಗಳಿಗೆ ಪ್ರಮಾಣೀಕರಿಸುವ ಧರ್ಮ ಶಾಸ್ತ್ರ ಗ್ರಂಥಗಳೂ ಸಮಾನವೇ.

ಇವುಗಳಲ್ಲಿ ಮುಖ್ಯವಾದುವುಗಳೆಂದರೆ—

ಗೌತಮ ಸೂತ್ರ, ಬೋಧಾಯನ ಗೃಹ್ಯಸೂತ್ರ, ಹಿರಣ್ಯಕೇಶಿ ಗೃಹ್ಯ ಸೂತ್ರ, ಧರ್ಮ ಸೂತ್ರ, ಆಪಸ್ತಂಭ ಗೃಹ್ಯ ಸೂತ್ರ, (ಧರ್ಮ ಸೂತ್ರ) ವಾಶಿಷ್ಠ ಸ್ಮೃತಿ, ವಿಷ್ಣು ಧರ್ಮ ಸೂತ್ರ, ಹಾರೀತ ಸ್ಮೃತಿ, ಶಂಖಲಿಖಿತ ಸ್ಮೃತಿ, ಮನುಸ್ಮೃತಿ, ಕೌಟಿಲ್ಯಾರ್ಥ ಸೂತ್ರ, ಯಾಜ್ಞವಲ್ಕ್ಯ ಸ್ಮೃತಿ, ಪರಾಶರ ಸ್ಮೃತಿ, ನಾರದ ಸ್ಮೃತಿ, ಬೃಹಸ್ಪತಿ ಸ್ಮೃತಿ, ಪುಲಸ್ತ್ಯ ಸ್ಮೃತಿ, ಪೈಠೀನಸೀ ಸ್ಮೃತಿ, ಪ್ರಚೇತಃ ಸ್ಮೃತಿ, ಪ್ರಜಾಪತಿ ಸ್ಮೃತಿ, ಮರೀಚಿಸ್ಮೃತಿ, ಯಮ ಸ್ಮೃತಿ, ಖಾದಿರ ಗೃಹ್ಯ ಸೂತ್ರ, ಸ್ಮೃತಿ ಚಂದ್ರಿಕಾ, ಸ್ಮೃತಿ ರತ್ನಾಕರ, ನಾರಾಯಣ ಭಟ್ಟೀ, ಸನಾತನ ಧರ್ಮ ಪ್ರದೀಪ, ಯಾಜುಷೀ ಗೃಹ್ಯ ಬೋಧಿನೀ, ವ್ಯಾಸ ಸ್ಮೃತಿ ಮೊದಲಾದವು.

ಧರ್ಮ ಪ್ರಮಾಣಗಳ ಮಹತ್ವ :

ಈ ಗ್ರಂಥಗಳು ಪ್ರಾಚೀನ ಸಂಪ್ರದಾಯಜ್ಞರಾದ ಮಹಾಋಷಿಗಳು, ಜ್ಞಾನಿಗಳಿಂದ ರಚಿಸಲ್ಪಟ್ಟಿದ್ದು, ಕೇವಲ ವೇದಾರ್ಥ ಸಂಗ್ರಾಹಕವಾದ್ದರಿಂದಲೇ, ಪ್ರಮಾಣ ಶ್ರೇಷ್ಠವಾಗಿವೆ. ಪ್ರಾಚೀನ ಪರಂಪರೆಯ ಮಹತ್ವವನ್ನು, ಪೂರ್ವಾಚಾರ್ಯ ಪ್ರವೃತ್ತ ಸಂಪ್ರದಾಯಗಳ ಹಿರಿಮೆಯನ್ನೂ, ಅವುಗಳ ಅವಶ್ಯಕತೆಗಳನ್ನೂ, ತದುಲ್ಲಂಘನೆಯಿಂದುಂಟಾಗುವ (ಅನರ್ಥ) ಪ್ರತ್ಯವಾಯಗಳನ್ನೂ, ಮಾನವರು ವರ್ಣಾ

ಶ್ರಮೋಚಿತವಾಗಿ ಸಮಯ ಸಂದರ್ಭಗಳಲ್ಲಿ ಪ್ರವರ್ತಿಸುವ ಮಾರ್ಗವಾದ ಲೋಕ ನೀತಿಗಳನ್ನೂ, ಸಾಮಾನ್ಯ ವಿಶೇಷ ನಿಯಮಗಳನ್ನೂ, ವಿಶದ ವಿಮರ್ಶಾಪೂರ್ವಕ ವಾಗಿ, ಪ್ರಮಾಣೋದಾಹರಣಪೂರ್ವಕವಾಗಿ ತಿಳಿಸುವ ಈ ಗ್ರಂಥಗಳು ಮುಮುಕ್ಷು ಗಳಾದ ಸಜ್ಜನರಿಂದ ಅವಶ್ಯವಾಗಿ ಉಪಾದೇಯ ಮತ್ತು ಸೇವ್ಯವಾಗಿವೆ. ಈ ಉತ್ತಮ ಧರ್ಮ ಬೋಧಕ ಕೃತಿಗಳ ಮೂಲವಾದ ವೇದದಿಂದಲೇ ಧರ್ಮಜ್ಞಾನ ವಾಗುವುದು, ಬಹು ಕಠಿಣವಾದ್ದರಿಂದ ಇವುಗಳ ಗ್ರಂಥಗಳ ಸಹಾಯದಿಂದಲೇ ವೇದ ಗಳ ಅರ್ಥ ಮಾಡಬೇಕು. ವೇದ ಮತ್ತು ಧರ್ಮಶಾಸ್ತ್ರ ಗ್ರಂಥಗಳನ್ನೂ ಒಪ್ಪದಿರು ವವನು ಅಧರ್ಮಿಷ್ಠ ಹಾಗೂ ವ್ರಾತ್ಯನೇ ಸರಿ.

ಶ್ರೀ ಅಖಣ್ಡಾಶ್ಮ ಪ್ರಲಯೇಪಿ ಪ್ರತಿಭಾತ ಪರಾವರರಾದ ಜೀವೋತ್ತಮರಾದ ಶ್ರೀ ಶ್ರೀಮದಾನಂದತೀರ್ಥರ ಮತಾನುಯಾಯಿಗಳಿಗಂತೂ, ಸರ್ವೋತ್ತಮನೂ, ಸಜ್ಜನ ಸಂಸೇವ್ಯನೂ ಆದ ಶ್ರೀ ಹರಿಯ ಆಜ್ಞೆಯೇ ಈ ಶೃತಿ ಸ್ಮೃತಿಗಳು.

"ಶೃತಿ ಸ್ಮೃತೀ ಹರೇ ರಾಜ್ಞೇ" ಎಂಬುದೇ ಶ್ರೀ ಮದಾಚಾರ್ಯರ ಮತ. ಈ ಅಭಿಪ್ರಾಯದಿಂದಲೇ ಆಚಾರ್ಯರು "ಶ್ರೀ ಮದ್ವಿಷ್ಣು ತತ್ವವಿನಿರ್ಣಯದಲ್ಲಿ "ಯಸ್ಯ ತೌ ನಾಭಿಮತೌ ನಾ ಸೌಸಮಯೀ ಸಮಯ ಪ್ರಯೋಜನಾಭಾವಾತ್" ಎಂದಿದ್ದಾರೆ ತೌ-ಧರ್ಮಾಧರ್ಮೌ (ಟೀಕಾರಾಯರು) ಧರ್ಮಾಧರ್ಮಗಳ ವ್ಯವಸ್ಥೆ ಎಲ್ಲಿರುವುದಿಲ್ಲವೋ ಅದು ಮತ (ಸಮಯ)ವೇ ಅಲ್ಲ ಎಂದಿದ್ದಾರೆ. ಮನುಷ್ಯನು ಭೂಮಿಯಲ್ಲಿ ಹುಟ್ಟಿದ ಮೇಲೆ ಯಾವುದಾದರೊಂದು ಧರ್ಮ ನಿಯಮಕ್ಕೆ ಒಳಪಟ್ಟಿ ರಲೇ ಬೇಕು. ಅನ್ಯಥಾ ಅವನು ಸ್ವೇಚ್ಛಾಧೀನ ಪ್ರವೃತ್ತಿಯುಳ್ಳವನಾಗಿ ರಾಜ ರಿಂದಲೋ ಅಥವಾ ಬಲಿಷ್ಠರಿಂದಲೋ ದಂಡ್ಯನೂ, ನಿಂದ್ಯನೂ, ವಧ್ಯನೂ ಆಗಿ ಬಿಡುತ್ತಾನೆ ಉದಾಹರಣೆಗಾಗಿ-

ಮುಖ್ಯ ಕರ್ತವ್ಯ :

ಭಾರತ ದೇಶದಲ್ಲಿ ಹುಟ್ಟಿ, ಇರುವ ಒಬ್ಬ ಪ್ರಜೆಯು ಭಾರತ ಸರಕಾರದ ನಿಯಮಗಳಿಗೂ, ಇತರ ದೇಶೋತ್ಪನ್ನ ಪ್ರಜೆಯು ತತ್ತದ್ದೇಶಾನುಸಾರ ನಿಯಮ ಗಳಿಗೂ ಹೇಗೆ ಬದ್ಧನಾಗಿರಲೇಬೇಕೋ ಹಾಗೆಯೇ ಬ್ರಾಹ್ಮಣನಾಗಿ ಹುಟ್ಟಿದವನು, ತನ್ನಿಯಮಗಳಿಗೂ, ಕ್ಷತ್ರಿಯನೂ ಅವನ ನಿಯಮಗಳಿಗೂ.....ಇತ್ಯಾದಿ ಇತ್ಯಾದಿ ... ಕಟ್ಟುಪಟ್ಟು ನಡೆದುಕೊಳ್ಳಲೇಬೇಕು. ಇಲ್ಲದಿದ್ದರೆ ಅಪಚಾರವಾಗುವುದು. ಬ್ರಾಹ್ಮಣನಾಗಿ ಹುಟ್ಟಿದವನು ತನ್ನ ಧರ್ಮ (ಬ್ರಾಹ್ಮಣ್ಯ) ರಕ್ಷಣೆಗಾಗಿ, ಅವಶ್ಯವಾಗಿ ಈ ಕೆಳಕಂಡವುಗಳನ್ನು ಅವಶ್ಯವಾಗಿ ಪಾಲಿಸಲೇಬೇಕು.

೧. ಷೋಡಶ ಸಂಸ್ಕಾರಗಳನ್ನು ಕ್ರಮವಾಗಿ ಸಕಾಲದಲ್ಲಿ ಹೊಂದುವುದು.
೨. ಚತುರ್ವಿಧ ಆಶ್ರಮಗಳಲ್ಲೊಂದನ್ನು ಅವಲಂಭಿಸಿ ಸ್ವಾಶ್ರಮೋಚಿತ ಧರ್ಮದಂತೆ ನಡೆದುಕೊಳ್ಳುವುದು.

೩. ತನಗೆ ವಿಹಿತವಾದ ವೃತ್ತಿಯಿಂದ ಉಪಜೀವಿಸುವುದು.
೪. ವಿಹಿತ ಕರ್ಮಾನುಷ್ಠಾನದಿಂದ ಮನಃಶುದ್ಧಿಗೊಳಿಸಿ, ತದ್ವಾರಾ ಆಧ್ಯಾತ್ಮಿಕ ಚಿಂತನೆ ಮಾಡುವುದು.
೫. ತಾನು ಮಾಡುವ ವಿಹಿತ ಕರ್ಮಕ್ಕನುಗುಣವಾಗಿ ವೇಷಭೂಷಣಗಳನ್ನು ಇಟ್ಟುಕೊಳ್ಳುವುದು ಇತ್ಯಾದಿ.

ಸಂಸ್ಕಾರಗಳ ಹಿರಿಮೆ :

ಉಚಿತ ದೇಶದಲ್ಲಿ ಕಾಲೋಚಿತ ಸಂಸ್ಕಾರ ಹೊಂದಿದ ಬ್ರಾಹ್ಮಣನೇ ಸ್ವೋಚಿತ, ವೇದಾಧ್ಯಯನ, ಜ್ಞಾನಾರ್ಜನೆ, ಕರ್ಮಾನುಷ್ಠಾನಗಳಿಗೆ ಅಧಿಕಾರಿಯಾಗುತ್ತಾನೆ ಇಲ್ಲದಿದ್ದರೇ ಅವನು ಬ್ರಾಹ್ಮಣ್ಯವನ್ನೇ ಕಳೆದುಕೊಂಡು ಅನಧಿಕಾರಿಯಾಗುತ್ತಾನೆ. ಅಕ್ಷತ್ರ ಸಂಸ್ಕಾರಯುತೋ ಜಾತೋಪಿ ಕ್ಷತ್ರಿಯೇ ಕುಲೇ ।

ನಕ್ಷತ್ರಿಯೋ ಭವತಿ ಸಃ ಯಥಾವ್ರಾತ್ಯೋದ್ವಿಜೋತ್ತಮಃ ॥ (ಮಹಾ ಭಾ 1೩ 37-38) ಅಂದರೆ ಹೇಗೆ ಬ್ರಾಹ್ಮಣ ಕುಲೋತ್ಪನ್ನನಾದವನು ತದುಚಿತ ಸಂಸ್ಕಾರ ಹೊಂದದೇ ಇದ್ದಲ್ಲಿ ವ್ರಾತ್ಯನಾಗುತ್ತಾನೆ. (ಸರ್ವ ಕರ್ಮಾನಧಿಕಾರಿ) ಹ್ಯಾಗೋ ಹಾಗೆ ಕ್ಷತ್ರಿಯನೂ ಅಸಂಸ್ಕೃತನಾದವನು ತದ್ಧರ್ಮದಿಂದ ಚ್ಯುತನಾಗುವನು ಎಂದು ಭೀಮಸೇನ ದೇವರು ಹೇಳಿರುವರು.

ಈ ಸಂಸ್ಕಾರಗಳು ಸಂಖ್ಯೆಯಲ್ಲಿ ಹದಿನಾರು, ಅವು ಯಾವುವೆಂದರೇ....
೧. ಗರ್ಭಾದಾನ ೨. ಪುಂಸವನ ೩. ಅನವಲೋಭನ ೪. ಸೀಮಂತ ೫ ಉನ್ನಯನ ೬. ಜಾತಕರ್ಮ ೭. ನಾಮಕರಣ ೮. ನಿಷ್ಕ್ರಮಣ ೯. ಅನ್ನಪ್ರಾಶನ ೧೦ ಚೌಲ ೧೧. ಉಪನಯನ ೧೨ ಸಾವಿತ್ರೀವ್ರತ, ವೇದಮಹಾವ್ರತ, ಅರಣ್ಯ ವ್ರತಗಳು ೧೩. ಉತ್ಸರ್ಜನೋಪಾಕರ್ಮ ೧೪. ಗೋದಾನ (ಕೇಶಾಂತ) ೧೫. ಸ್ನಾತಕ ೧೬. ವಿವಾಹ. ಈಗಿನ ಪದ್ಧತಿಯಲ್ಲಿ ಪುಂಸವನ ಕರ್ಮವು ಪ್ರಾಯಃ ಲುಪ್ತವಾಗಿವೆ.

ಜಾತಕರ್ಮ, ನಾಮಕರಣದೊಂದಿಗೆ ಆಗುತ್ತದೆ. ಅನ್ನಪ್ರಾಶನ ಮಗುವಿನ ೬ನೇ ತಿಂಗಳಲ್ಲಿ ಆಗುತ್ತದೆ ಮತ್ತು ಸಮಾವರ್ತನ ಲಗ್ನದೊಂದಿಗೆ ಆಗುತ್ತದೆ. ಆದರೆ ಯಾವ ಕಾಲದಲ್ಲಿ ಯಾವುದು ವಿಹಿತವಾಗಿದೆಯೋ ಅದನ್ನು ಆ ಕಾಲದಲ್ಲೇ ಮಾಡಬೇಕು.

ಬ್ರಾಹ್ಮಣನಾದ ಮೇಲೆ ಪುರುಷರಿಗೆ ಮಾತ್ರ ವಿಹಿತವಾದ ಪ್ರಥಮ ಸಂಸ್ಕಾರ ಚೌಲ. ಚೌಲದ ಪೂರ್ವದಲ್ಲಿ ಆಗುವ ೯ಸಂಸ್ಕಾರಗಳು ಮತ್ತು ವಿವಾಹ ಸ್ತ್ರೀ-ಪುರುಷ ಸಾಧಾರಣವಾದದ್ದು. ಚೌಲ, ಉಪನಯನ, ಸಾವಿತ್ರೀವ್ರತ, (ವೇದಾಬ್ಧವ್ರತ, ಅರಣ್ಯವ್ರತ), ಉಪಾಕರ್ಮ, ಗೋದಾನವ್ರತ, ಸ್ನಾತಕವ್ರತ ಇವಿಷ್ಟು ಪುರುಷರಿಗೆ ಮಾತ್ರ ಮಂತ್ರಪೂರ್ವಕವಾಗಿ ಆಗಬೇಕಾದ ವ್ರತಗಳು (ಸಂಸ್ಕಾರಗಳು)

"ಉಪನಯನಾತ್ ಉಪಾಕರ್ಮಾಂತಂ ಸಾವಿತ್ರೀವ್ರತಂ ।
ತತಃ ವೇದಾಬ್ಧವ್ರತಂ ತತಶ್ಚ ಅರಣ್ಯಕವ್ರತಾನಿ ।
ಪ್ರತಿವ್ರತಂ ವಪನಂ ಚ ॥ (ಸ್ಮೃತ್ಯರ್ಥಸಾರಃ, ಪುಟ ೬)

ಉಪನಯನವಾದ ಮೇಲೆ ಉಪಾಕರ್ಮವಾಗುವ ಪರ್ಯಂತ ಸಾವಿತ್ರೀ ವ್ರತವು ಅನಂತರ ವೇದಾಬ್ಧ, ಅರಣ್ಯಕ ವ್ರತಗಳು. ಪ್ರತಿಯೊಂದು ವ್ರತಕ್ಕೂ ವಪನ ಕರ್ತವ್ಯವಾಗಿದೆ. ಪುರುಷರಿಗೆ ಮಾತ್ರ ವಿಹಿತವಾದ ಸಂಸ್ಕಾರಗಳಲ್ಲಿ ಮೊದಲನೆಯದಾದ ಚೌಲ (ಚೂಡಾಕರ್ಮ)ವು ಮಂತ್ರಪುರಸ್ಸರವಾಗಿ ಶಿಖಾವನ್ನು ಇಡಿಸಿ ಪುರುಷನನ್ನು ಕರ್ಮಾಧಿಕಾರಿಯನ್ನಾಗಿ ಮಾಡುವ ಪ್ರಧಾನ ಸಂಸ್ಕಾರವಾಗಿದೆ. ಹೀಗೆ ಸುಸಂಸ್ಕೃತನಾದವನು ತತ್ತತ್ಸಂಸ್ಕಾರ ಚಿಹ್ನೆಗಳನ್ನು ರಕ್ಷಿಸಿಕೊಂಡು ಮುಂದುವರಿಯಬೇಕು, ಎಂಬುದೇ ಸಂಸ್ಕಾರದ ಕರ್ತವ್ಯದ ಧ್ಯೇಯೋದ್ದೇಶವಾಗಿದೆ. ಈ ಕರ್ಮವನ್ನು ಮಗು ಹುಟ್ಟಿದ ಪ್ರಥಮ ವರ್ಷ, ತೃತೀಯ ವರ್ಷದಲ್ಲಿಯೋ ಮಾಡತಕ್ಕದ್ದು.

ಚೂಡಾಕರ್ಮ (ಚೌಲ) :

॥ ಚೂಡಾಕರ್ಮ ದ್ವಿಜಾತೀನಾಂ ಸರ್ವೇಷಾಮೇವ ಧರ್ಮತಃ ।
ಪ್ರಥಮೇಽಬ್ದೇ ತೃತೀಯೇ ವಾ ಕರ್ತವ್ಯಂ ಶ್ರುತಿಚೋದನಾತ್ ॥
(ಮನು ೨ ॥ ೩೫)

ಈ ಸಂಸ್ಕಾರದಿಂದ ಶಿಖಾಧಾರಣೆ ಮಾಡಲೇಬೇಕು ಹಾಗೂ ಆಮರಣಾಂತವಾಗಿ ಶಿಖಾ ರಕ್ಷಣೆ ಮಾಡಬೇಕು. ವಿಹಿತವಾದ ಪ್ರಾಯಶ್ಚಿತ್ತ ಮಾಡುವ, ಸನ್ಯಾಸಾಶ್ರಮ ಸ್ವೀಕಾರ ಮಾಡುವುದು ಇತ್ಯಾದಿ ಕೆಲವು ವಿಶೇಷ ಸಂದರ್ಭಗಳಲ್ಲಿ ಮಾತ್ರ ಶಿಖಾ ಛೇದನ ವಿಹಿತವಾಗಿದೆ.

ಈ ಚೂಡಾಕರ್ಮ ಬ್ರಾಹ್ಮಣ, ಕ್ಷತ್ರಿಯ, ವೈಶ್ಯಜಾತಿಯಲ್ಲಿ ಜನಿಸಿದವರಿಗೆ ಪಿತ್ಯನಿಯತವಾಗಿದೆ. ಶ್ರುತಿಯಿಂದ ವಿಧಿಸಲ್ಪಡುವ ಈ ಪ್ರಮುಖ ಸಂಸ್ಕಾರವು ಬ್ರಾಹ್ಮಣನಿಗೆ ಉಪನಯನ ಎಷ್ಟು ಅವಶ್ಯಕವೋ ಅಷ್ಟೇ ಅಗತ್ಯವಾಗಿದ್ದು ಸ್ಮೃತಿಗಳಲ್ಲಿ ಬಹುವಾಗಿ ಪ್ರಶಂಸಿಸಿ ವರ್ಣಿಸುತ್ತಾ ಅದರ ವಿಧಿಗಳನ್ನು ತಿಳಿಸಿದ್ದಾರೆ.

ಚೂಡಾಕರ್ಮದ ಕ್ರಮ :

ಉಪ್ತ್ವಾಯ ಕೇಶಾನ್ ವರುಣಸ್ಯರಾಜ್ಞೋ ಬೃಹಸ್ಪತಿಸ್ಸವಿತಾ ಸೋಮೋ ಅಗ್ನಿಃ । ತೇಭ್ಯೋ ನಿಧಾನಂ ಬಹುಧಾನ್ವವಿಂದನ್ನಂತರಾದ್ಯಾವಾ ಪೃಥ್ವೀಅಪಸ್ಸುವಃ ॥ ಇತಿ ಕೇಶ ಸಂಹಿತ ಅನಡುಶಕೃತ್ಪಿಂಡಾನ್ ಔದುಂಬರ ಮೂಲೇದರ್ಭಸ್ತಂಭೇವಾ ಉಪಗೂಹತಿ ॥ (ಯಾಜುಷೀಗೃಹ್ಯಬೋಧಿನೀ)

ಆಯಸಕ್ಷುರದಿಂದ ಶಿರಃಕೇಶಗಳನ್ನು ನಾಪಿತನಿಂದ ವಪನ ಮಾಡಿಸಿ ಅವುಗಳನ್ನು ಇಂದ್ರ, ವರುಣ, ಬೃಹಸ್ಪತಿಸ್ಸವಿತಾ=ಸೂರ್ಯ, ಚಂದ್ರ, ಅಗ್ನಿ ಇವರುಗಳ ಪ್ರೀತಿಗಾಗಿ ಬಹುವಿಧ ನಮ್ಮ ಶ್ರೇಯಸ್ಸಿಗೂ ಅತ್ತಿಗಿಡದ ಬೇರಿನ ಜಾಗದ ಭೂಮಿ

ಯಲ್ಲಿ ಅಥವಾ ದರ್ಭಸ್ತಂಭದಲ್ಲಿ ಮುಚ್ಚಬೇಕು ಎಂದು ವಿಧಿಸಿದ್ದಾರೆ. (ಯಾಜುಷೀ ಗೃಹ್ಯಬೋಧಿನೀ)

"ತೃತೀಯಸ್ಯಚ ವರ್ಷಸ್ಯ ಭೂಯಿಷ್ಠೇಗತೇ ಚೂಡಾಃ ಕರ್ತವ್ಯಾಃ" ಚೂಡಾ ಶಿಖಾ. (ಸ್ಮೃತಿ ಚಂದ್ರಿಕಾ-ಸಂಸ್ಕಾರಕಾಂಡಂ) ಎಂಬ ಗ್ರಂಥದಲ್ಲಿ ಚೂಡಾಕರಣ ಪ್ರಕರಣದಲ್ಲಿ ಪುಟ-೫೧ (ಲೋಗಾಕ್ಷಿಸ್ಮೃತಿ.)

ಅಂದರೆ ಶಿಶುವಿಗೆ ಮೂರು ವರ್ಷ ತುಂಬುವುದರೊಳಗೆ, ಮೂರನೆಯ ವರ್ಷದ ಮುಕ್ಕಾಲು ಭಾಗ ಅಂದರೆ ೯ ತಿಂಗಳು ಕಳೆದ ಮೇಲೆ ಶಿಖಾವನ್ನು ಇಡಿಸಬೇಕು. ಶೌನಕೋಽಪಿ-ಪುಟ ೫೯.

"ತೃತೀಯೇ ವರ್ಷೇ ಚೌಲಂ ಯಥಾ ಕುಲಧರ್ಮಂವಾ" ಎಂದಿದ್ದಾರೆ. ಸ್ಮೃತಿ ಚಂದ್ರಿಕಾದಲ್ಲಿ "ಯಸ್ಮಿನ್ಕುಲೇ ಯಥಾ ಚೂಡಾಕರ್ಮತಥೈವಕಾರ್ಯಂ" "ಉದಂಗುತ್ಸೃಜ್ಯ ಕುಶಲೀ ಕಾರಯೇತ್" "ಯಥಾ ಗೋತ್ರಕುಲಕಲ್ಪಂ" ಎಂಬುದಾಗಿ (ಖಾದಿರ ಗೃಹ್ಯ ಸೂತ್ರ ೩೦ ಪುಟ-೬೬.)

**ಶಿಖಾದಲ್ಲಿ ವೈವಿಧ್ಯ**

"ವಪನಂ ಕಾರಯೇನ್ನಾಪಿತೇನ । ಗೋತ್ರಾದಿವಶೇನ ಶಿಖಾವ್ಯವಸ್ಥಾ ಸ್ಮರ್ಯತೇ ತದನುಸಾರೇಣ ನಾಪಿತಂ ಸಂಪ್ರೇಷ್ಯ ಹೋಮಂ ಸಮಾಪಯೇತ್" (ರುದ್ರಸ್ಕಂದಭಾಷ್ಯಂ) ಎಂದರೆ ಉತ್ತರ ದಿಕ್ಕಿನಲ್ಲಿ ಉತ್ಸರ್ಜನೆ ಮಾಡಿಸಿ ಗೋತ್ರ ಕುಲಾಚಾರಕ್ಕನುಗುಣವಾಗಿ ಶಿಖಾಧಾರಣೆ ಮಾಡಿಸುವುದು.

ಗೋತ್ರಾನುಸಾರಿಯಾದ ಶಿಖಾವ್ಯವಸ್ಥೆಯು ಹೀಗಿರುತ್ತದೆ.

ವಶಿಷ್ಠಗೋತ್ರಂ=ದಕ್ಷಿಣತಃ=ಬಲಭಾಗದಲ್ಲಿ ಶಿಖಾ. ಅತ್ರಿ ಮತ್ತು ಕಶ್ಯಪ ಗೋತ್ರದವರು....(ಹಾಗೂ ಪ್ರವರದಲ್ಲಿ ಎಷ್ಟು ಋಷಿಗಳೋ ಅಷ್ಟು ಶಿಖೆಗಳು) ಎರಡೂ ಕಡೆಗಳಲ್ಲಿ. ಭೃಗು ಗೋತ್ರ=ಶಿಖಾ ರಹಿತರಾಗಿರುವುದು. (ಸಂಪೂರ್ಣ ಬೋಡು ತಲೆ ಆಗಿರಬೇಕು) ಆಂಗಿರಸ ಗೋತ್ರಂ=ಎಡ, ಬಲ, ಹಿಂದೆ, ಮುಂದೆ, ಮಧ್ಯ ಹೀಗೆ ಐದು ಭಾಗಗಳಲ್ಲಿ ಶಿಖಾಗಳನ್ನು ಇರಿಸಬೇಕು.

ಈ ಎಲ್ಲ ಗೋತ್ರದವರೂ ಋಷಿಸಂಖ್ಯೆಗನುಗುಣವಾಗಿ ಶಿಖಾ ಧಾರಣೆ ಮಾಡಬೇಕು. ಇದಕ್ಕೆ ಪ್ರಮಾಣ :-(ಸ್ಮೃತಿ ಚಂದ್ರಿಕಾ-ಸಂಸ್ಕಾರ ಕಾಂಡ-ಪುಟ ೫೯.)

"ಅತ್ರಾಪಿ ತತ್ರ ದ್ಗೃಹ್ಯಾನು ಸಾರೇಣ ವ್ಯವಸ್ಥಾ, ತತ್ರ ಋಷಿ ವ್ಯವಸ್ಥಯಾ ಚೂಡಾದಿ ನಿಯಮಮಾಹ, ಲೋಗಾಕ್ಷಿಃ

"ದಕ್ಷಿಣತಃ ಕಮುಜಾ ವಶಿಷ್ಠಾನಾಂ, ಉಭಯತೋ ಅತ್ರಿಕಾಶ್ಯಪಾನಾಂ ಮುಂಡಾಃ ಭೃಗವಃ, ಪಂಚಚೂಡಾಃ ಅಂಗೀರಸಃ ವಾಜಿಮೇಕೇ ಮಂಗಲಾರ್ಥ ಶಿಖಿನ್ಯೋನ್ಯೆ ಯಥಾ ಕುಲಧರ್ಮಂ ವಾ

ಪ್ರತಿಯೊಂದು ಸಂಸ್ಕಾರವೂ ದೇಶ, ಗೃಹ್ಯ, ಗೋತ್ರ, ಸಂಪ್ರದಾಯ ಕುಲ ಧರ್ಮಗಳ ಭೇದದಿಂದ ಭಿನ್ನಭಿನ್ನ ಕ್ರಮವುಳ್ಳದ್ದಾಗುತ್ತದೆ. ಉತ್ತರ ದೇಶದಲ್ಲಿ ಒಂದು ಕ್ರಮವಾದರೆ ದಕ್ಷಿಣ ದೇಶದವರು ತದ್ಭಿನ್ನ ಕ್ರಮವನ್ನನುಸರಿಸುತ್ತಾರೆ (೧) ಕೆಲವರು ಆಪಸ್ತಂಭ ಗೃಹ್ಯ ಸೂತ್ರಾನುಸಾರಿಗಳಾಗಿರುತ್ತಾರೆ. (೨) ಮತ್ತೆ ಕೆಲವರು ಖಾದಿರವನ್ನನುಸರಿಸಿರುತ್ತಾರೆ. ಹೀಗೆ ಗೋತ್ರ, ಕುಲ, ಸಂಪ್ರದಾಯ ಧರ್ಮಗಳಲ್ಲಿ ಭೇದವು ಸರ್ವವಿದಿತವಾದದ್ದು. ಅದರಂತೇ ಶಿಖಾ ಧಾರಣದಲ್ಲಿಯೂ ಕೆಲವು ಭೇದವು ಇದ್ದೇ ಇರುತ್ತದೆ.

ಚೂಡಾಕೇಶೀ ಕೇಶಪಾಶೀ ಶಿಖಂಡೀ ಕಮುಂಜಾ ಶಿಖಾ ॥ ವೈಜಯಂತೀ ಕ್ಲೇಶ ೪-೪-೧೪

೧:-ಚೂಡಾಕೇಶೀ ಕೇಶಪಾಶೀ ಶಿಖಂಡೀ ಕಮುಂಜಾ ಶಿಖಾ॥ ವೈಜಯಂತೀಕೋಶ ೪-೪-೧೦೨

ಕಮುಂಜಾ—ಎಂದರೆ ಕೇಶಪಂಕ್ತಿಃ, ವಾಜಿ—ಚೂಡ, ಜುಟಿಕಾ, ಶಿಖಾ, ಕೇಶಪಾಶೀ, ಜಟಾ, ಕಮುಂಜಾ, ಕೇಶಪಂಕ್ತಿಃ ಇತಿ ವಂಶಯ ಮಾಧವೀಯ. ಹೀಗೆ ಸಾಮವೇದಿಗಳಿಗೆ ಸಂಪೂರ್ಣ ಮುಂಡನವೇ ವಿಹಿತವಾಗಿದೆ. (ಭರತವಾಕ್ಯಂ—ವಿಷ್ಣುಪುರಾಣೆ)

ಏತೇ ಲೂನಾ ಶಿಖಾಸ್ತಸ್ಯದ ಶನ್ಯೈರ ಚಿರೋದ್ಗತ್ಯೈಃ ಕುಶಕಾಶಾವಿರಾ ಜಂತೇ ವಟವಃ ಸಾಮಗಾ ಇವ (ಸ್ಮೃಚಂ-ಪುಟ—೧೨೬)

"ಅಪರೇಣಾಗ್ನಿಂ ಪ್ರಾಙ್ಮುಖಮುಪವೇಶ್ಯ ತ್ರೇಣ್ಯಾ, ಶೌಲಲ್ಯಾ ತ್ರಿಭಿದರ್ಭ ಪುಂಜೀಲೈಃ ಶಲಲ್ಯಾ ಲುಗ್ಲಪ್ಸೇನ ತೂಷ್ಣೀಂ ಕೇಶಾನ್ ವಿನೀಯುಯಥರ್ಷಿ ಶಿಖಾನಿದಧಾತಿ॥" (ಆಪಸ್ತಂಭ ಗೃಹ್ಯ ಸೂತ್ರಂ) "ಕೇಶಾನ್ ವಿನೀಯ=ವಿವಿಧಂ ನೀತ್ವಾವಸ್ಥಾನ್ ಶಿಖಾರ್ಥಾನ್ ಚ ಪೃತಕ್ ಪೃಥಕ್ಕೃತ್ವಾ ಇತ್ಯರ್ಥಃ (ಗೋವಿಂದ ಕೃತ ಭಾಷ್ಯಂ) ಅಂದರೆ ಅಗ್ನಿಯ ಪೂರ್ವ ದಿಕ್ಕಿನಲ್ಲಿ ಬಾಲಕನನ್ನು ಕೂಡಿಸಿ, ತ್ರೇಣಿ ಎಂಬ ಪಕ್ಷಿಯ ಪುಕ್ಕೆಯಿಂದ, ಮೂರು ದರ್ಭಗಳಿಂದ ಕೂಡಿಸಿ ಮೌನದಿಂದ ತಲೆಗೂದಲುಗಳ ಮಧ್ಯವಪನ ಮಾಡಬೇಕಾದ ಕೂದಲುಗಳನ್ನು ಧಾರ್ಯವಾದ ಶಿಖಾಕೇಶಗಳಿಂದ ಬೇರ್ಪಡಿಸಿ ಋಷಿ ವ್ಯವಸ್ಥೆಯಂತೆ ಶಿಖಾಧರಿಸಬೇಕು.

ಇದರ ವಿಧಿಯನ್ನು ಯಾಜುಷೀ ಗೃಹ್ಯ ಬೋಧಿನಿಯಲ್ಲಿ—

ಶಿಖಾಧಾರಣ ವಿಧಿ :

"ಕ್ಷುರಧಾರಾಮವಮೃಜ್ಯ, ಏಕಾರ್ಷೇಯಸ್ಯ—ಏಕ ಶಿಖಾ, ದ್ವ್ಯಾರ್ಷೇಯಸ್ಯ ದ್ವೇ ಶಿಖೇ, ತ್ರ್ಯಾರ್ಷೇಯಸ್ಯ, ತಿಸ್ರಃ ಶಿಖಾಃ ಚತುರಾರ್ಷೇಯಸ್ಯ-ಚತಸ್ರಃ ಶಿಖಾಃ, ಪಂಚಾರ್ಷೇಯಸ್ಯ-ಪಂಚಶಿಖಾಃ ನಾಪಿತೇನ ಕಾರಯಿತ್ವಾ ವಾಪಯೇತ್, ಕ್ಷುರಂ ಪ್ರಕ್ಷಾಲ್ಯತೇನ ತ್ರ್ಯಹಂಕರ್ಮ ನಿವೃತ್ತಿಃ ! ಕುಮಾರಂ ಸಮ್ಸ್ನಪಯಿತ್ವಾ,

ಕುಮಾರಮಲಂ ಕೃತ್ಯ, ಮಾತುರುತ್ಸಂಗೇ ಅವಸ್ಥಾಪ್ಯ. ನೀರಾಜನಾದಿ ಕಾರೆಯಿತ್ವಾ ಬ್ರಾಹ್ಮಣಾನ್ಭೋಜಯಿತ್ವಾ, ಆಶಿಷೋ ವಾಚಯೇತ್ ವ್ರೀಹ್ಯಾದಿ ಪಾತ್ರ ಚತುಷ್ಟಯಂ ನಾಪಿತಾಯ ದದ್ಯಾತ್-ಅಂದರೆ, ಕತ್ತಿಯನ್ನು ತೊಳೆದಿಟ್ಟು, ಏಕರ್ಷಿಗೋತ್ರದವರಿಗೆ ಒಂದು, ಎರಡು ಋಷಿಗಳುಳ್ಳ ಗೋತ್ರದವರಿಗೆ ಎರಡು, ಹೀಗೆ ಗೋತ್ರಾನುಸಾರ ಮೂರು, ನಾಲ್ಕು, ಐದು ಕ್ರಮವಾಗಿ ಶಿಖಾಗಳನ್ನಿಡಿಸಿ ಉಳಿದ ಕೇಶಗಳನ್ನು ನಾಪಿತನಿಂದ ವಪನಮಾಡಿಸಿ ಕ್ಷುರ ತೊಳೆಸಿದರೆ, ಆ ಕಾರ್ಯ ಮುಗಿಯಿತು. ಕುಮಾರನನ್ನು ಸ್ನಾನ ಮಾಡಿಸಿ ಅಲಂಕರಿಸಿ ತಾಯಿಯ ಮಡಿಲಲ್ಲಿ ಕೂಡಿಸಿ ಆರತಿ ಮುಂತಾದುವುಗಳನ್ನು ಬ್ರಾಹ್ಮಣ ಭೋಜನ ಮತ್ತು ಆಶೀರ್ವಾದ ಮಾಡಿಸಿ ನಾಲ್ಕು ಧಾನ್ಯ ತುಂಬಿದ ಪಾತ್ರೆಗಳನ್ನು ನಾಪಿತನಿಗೆ ಕೊಡಬೇಕು. ಇದೇ ಅರ್ಥ ಕೊಡುವ ವಾಕ್ಯಗಳು ಯಾಜುಷೀಪೂರ್ವಪ್ರಯೋಗ ರತ್ನಾಕರ ಎಂಬ ಗ್ರಂಥದಲ್ಲಿಯೂ ಇದೆ.

"ಅಗ್ನೇಃ ಪಶ್ಚಾತ್ ಪ್ರಾಙ್ಮುಖಂ ಕುಮಾರಂ ಉಪವೇಶ್ಯ
ಸಹಿತೈಃ ಶಲಲ್ಯಾದಿಭಿಃ ಶಿಖಾರ್ಥಾನ್ ಕೇಶಾನ್
ಪೃಥಕ್ಕೃತ್ಸ ವಪ್ತವ್ಯಾನ್ ತೂಷ್ಣೀಂ ಪೃಥಕ್ಕೃತ್ಸ

ಅಗ್ನಿಯ ಪಶ್ಚಾತ್ ಭಾಗದಲ್ಲಿ ಪೂರ್ವಮುಖನಾಗಿ ಬಾಲಕನನ್ನು ಕೂಡಿಸಿ ಉಚಿತ ಉಪಕರಣಗಳಿಂದ ವಪನಯೋಗ್ಯವಾದ ಕೇಶಗಳನ್ನು ಬೇರ್ಪಡಿಸಿ ಮೌನದಿಂದ, ಶಿಖಾಕ್ಕೆ ಯೋಗ್ಯವಾದ ಕೂದಲುಗಳನ್ನು ಬೇರ್ಪಡಿಸಿ ನಂತರ ವಪನ ಮಾಡಿಸಬೇಕು.

ಸಂವತ್ಸರೇ ಚೂಡಾಕರ್ಮ ತ್ರಿಷುವಾ ಸಂವತ್ಸರೇಷು [ಬೋಧಾ, ದ್ವಿತೀಯ ಪ್ರಶ್ನೆ, ಚತುರ್ಥಾಧ್ಯಾಯ, ಪ್ರಥಮಸೂತ್ರ]—ಇದರ ಅರ್ಥ ಸುಸ್ಪಷ್ಟ. ಅಥೈನ ಮೇಕಶಿಖಸ್ತ್ರಿಶಿಖಃ ಪಂಚಶಿಖೋವಾಯದ್ವೈಷಾಂಕುಲಧರ್ಮಃಸ್ಯಾತ್ ಕ್ರಮವಾಗಿ ಒಂದು, ಎರಡು, ಮೂರು ಅಥವಾ ಐದು ಶಿಖಾಗಳನ್ನಿಡಿಸುವುದು ಅಥವಾ ಕುಲ ಧರ್ಮದಂತಾಗಲಿ ಶಿಖಾ ಬಿ(ಇ)ಡಿಸಬೇಕು (ಬೋ-ದ್ವಿಪ್ರ-ಚಅ-೧೭)

"........... ................. ವಾಶಿಷ್ಠಾನಾಂತುದಕ್ಷಿಣೇ ।
ಶಥ್ಯೆವ್ಯೋಭಯತಶ್ಚಾತ್ರೀ ಕಾಶ್ಯಪಾನಾಂ ಶಿಖಾವತಾ॥ (ನಾರಾಯಣ ಭಟ್ಟೀ)

ಈ ಪ್ರಮಾಣವು ಸಹ ಪೂರ್ವೋಕ್ತ ಅಭಿಪ್ರಾಯವನ್ನೇ ದೃಢೀಕರಿಸುತ್ತದೆ. ಏವಂ ರೀತ್ಯಾ ಅನೇಕ ಶ್ರುತ್ಯುಕ್ತ ಮಂತ್ರಗಳಿಂದ ಮಾಡಲ್ಪಡುವ ಈ ಸಂಸ್ಕಾರವಾದ ಮೇಲೆ (ಈ ಸಂಸ್ಕಾರ ಆಗಿದೆ ಎಂದು ಸೂಚಿಸುವ) ಪ್ರಧಾನ ಚಿನ್ಹೆಯಾದ ಶಿಖೆಯನ್ನು ಯಾವಾಗಲೂ ಧರಿಸಿರಬೇಕು.

ಚೌಲದ ಪ್ರಧಾನೆ :—

ಸಪ್ತಪಾಕ ಯಜ್ಞಸ್ಥ ಸಂಸ್ಕಾರಗಳ ಮಧ್ಯೆ ಪ್ರಕೃತ ಎಂಬ ಹೆಸರಿನಿಂದ ಕರೆಸಲ್ಪಡುವ ಈ ಸಂಸ್ಕಾರವು ಮುಂದೆ ಮಾಡುವ ಪ್ರಕೃತಾನುಕೃತಿ ರೂಪವಾದ

ಉಪಾಕರ್ಮ, ಹೋತ್ರ್ಯಶುಕ್ರಿಯ ವ್ರತಚರ್ಯಾ, ಗೋದಾನ, ಸಾವಿತ್ರೀ, (ಸಂವಿತವ್ರತ) ಅವಾಂತರ ದೀಕ್ಷಾ, ಮುಂತಾದ ಅವಾಂತರ ಸಂಸ್ಕಾರಗಳಿಗೆ ಮೂಲವಾಗಿದ್ದು, ಅಧಿಕಾರ ಸಂಪ್ರಾಪಕವಾಗಿದೆ.

ಅಂದರೆ ಯಾರು ಪ್ರಹುತ ರೂಪವಾದ ಚೂಡಾಸಂಸ್ಕಾರ ಉಳ್ಳವರೋ ಅವರು ಚೂಡಾಕರ್ಮಾಧೀನವಾದ ಪ್ರಹುತಾನುಕೃತಿ ರೂಪವಾದ ಇತರ ಅವಾಂತರ ಸಂಸ್ಕಾರಗಳಿಗೆ ಅಧಿಕಾರ ಹೊಂದುತ್ತಾರೆ. ಹೀಗೆ ಈ ಚೌಲವು ಕಾಲಾಂತರದಲ್ಲಾಗುವ ಸಕಲ ಕರ್ಮಾನುಷ್ಠಾನಕ್ಕೂ ಸಹಕಾರಿಯಾಗಿರುತ್ತದೆ. ಆದ್ದರಿಂದ ಯಾರು ಚೌಲ ಮಾಡಿಸಿಕೊಂಡು ಕಾಲಾಂತರದಲ್ಲಿ ಅದರ ಪ್ರಧಾನ ಲಕ್ಷಣವಾದ ಶಿಖೆಯನ್ನು ತೆಗೆದುಬಿಡುವರೋ ಅವರು ಉಪನಯನ ಮಾಡಿಕೊಂಡು ಯಜ್ಞೋಪವೀತ ಮೇಖಲಾಗಳು ಬಿಟ್ಟಂತೆ, ವಿವಾಹವಾದವರು ಹೆಂಡತಿಯನ್ನು ಬಿಟ್ಟಂತೆ, ಸ್ವಧರ್ಮಭ್ರಷ್ಟರೂ ಆಗುವರು.

ಸದ್ಬ್ರಾಹ್ಮಣನ ಕರ್ತವ್ಯ :—

ಆದ್ದರಿಂದ ಬ್ರಾಹ್ಮಣನು ಸತ್ಕರ್ಮಾನುಷ್ಠಾನ, ಸದಾಚಾರ, ಸದ್ವಿದ್ಯಾರ್ಜನೆ ಇತ್ಯಾದಿಗಳಿಂದ ತನ್ನ ಬ್ರಾಹ್ಮಣ್ಯವನ್ನು ರಕ್ಷಿಸಿಕೊಳ್ಳಬೇಕಾದರೆ ಸರಿಯಾದ ಸಂಸ್ಕಾರ ಹೊಂದಿ, ಅದನ್ನು ಉಳಿಸಿಕೊಳ್ಳಲೇಬೇಕು.

"ನಾಕ್ರಿಯಃ ಬ್ರಾಹ್ಮಣಃ ನಾಸಂಸ್ಕಾರ ದ್ವಿಜಃ, ನಾಶ್ರೋತ್ರಿಯಸ್ಯಯಜ್ಞಃ" ಇತಿ ॥ (ಬೋಧಾ-ಪರಿಭಾಷಾಪ್ರ ಪ್ರಶ್ನ ಪ್ರ-ಅ-೨೩ನೇ ಸೂತ್ರ ಪುಟ ೧೧೪)

ಕರ್ಮಾನುಷ್ಠಾನ ಮಾಡದವನು ಬ್ರಾಹ್ಮಣನಲ್ಲ. ಸಂಸ್ಕಾರ ರಹಿತನಾದವನು ದ್ವಿಜನೇ ಅಲ್ಲ. ವಿದ್ಯಾರಹಿತನು ವಿಪ್ರನಲ್ಲ. ಕರ್ಮ, ಸಂಸ್ಕಾರ, ವಿದ್ಯಾ ಮೂರು ಇಲ್ಲದವನು ಶೋತ್ರಿಯನಲ್ಲ. ಇಂತಹವನಿಗೆ ಯಜ್ಞವು ವಿಹಿತವಲ್ಲ ಎಂಬುದೇ ಇದರ ಅರ್ಥ= ಇದರ ತಾತ್ಪರ್ಯ=ಬ್ರಾಹ್ಮಣ ತಾಯಿ--ತಂದೆಯಿಂದ ಹುಟ್ಟಿದವನು ಯದ್ಯಪಿ ಬ್ರಾಹ್ಮಣನೇ ಆದರೂ "ಬ್ರಾಹ್ಮಣ" ಎಂಬ ಶಬ್ದ ವಾಚ್ಯನಾಗಬೇಕಾದರೆ ಅವನು ಕರ್ಮಾನುಷ್ಠಾನ ಮಾಡಬೇಕು. ಕರ್ಮಾನುಷ್ಠಾನರಹಿತನು ಬ್ರಾಹ್ಮಣನೇ ಅಲ್ಲ. ಕಾಲ ಕಾಲದಲ್ಲಿ ಮಾಡಿದ ಸಂಸ್ಕಾರಗಳಿಂದಲೇ ಬ್ರಾಹ್ಮಣನು "ದ್ವಿಜ" ಎಂದೆನಿಸುವನು. ಅಂದರೆ ದ್ವಿಜ (ದ್ವಿಜ ಶಬ್ದವಾಚ್ಯ) ನಾಗಬೇಕಾದರೆ ಸುಸಂಸ್ಕೃತನಾಗಬೇಕು. ವಿದ್ಯಾರ್ಜನೆಯಿಂದ ಆ ದ್ವಿಜನು "ವಿಪ್ರ" ಎಂದೆನಿಸುವನು. ತಸ್ಮಾತ್ ವಿದ್ಯಾಭ್ಯಾಸ ಮಾಡಬೇಕು.

ಈ ಮೂರೂ (ವಿದ್ಯಾ, ಸಂಸ್ಕಾರ, ಕರ್ಮ) ಉಳ್ಳವನು ಶೋತ್ರಿಯನಾಗುತ್ತಾನೆ. ಇವುಗಳಲ್ಲೊಂದಿಲ್ಲದಿದ್ದರೂ ಅವನು ಶೋತ್ರಿಯನಲ್ಲ. ಶೋತ್ರಿಯನಲ್ಲದವನು ಯಜ್ಞ, ಅಧ್ಯಾಪನಾದಿ ಉತ್ತಮ ವಿಷಯಗಳಲ್ಲಿ ಅನಧಿಕಾರಿಯಾಗುವನು.

ಜನ್ಮನಾ (ಕರ್ಮಣಾ) ಬ್ರಾಹಮಣೋಜ್ಞೇಯಃ ಸಂಸ್ಕಾರೈಃ ದ್ವಿಜ ಉಚ್ಯತೇ। ವಿದ್ಯಯೈವ ಚ ವಿಪ್ರತ್ವಂ ತ್ರಿಭಿಃ ಶ್ರೋತ್ರಿಯ ಉಚ್ಯತೇ॥
ಯಾಜುಷೀಪೂರ್ವ ಪ್ರ. ರತ್ನಾಕರ ಪುಟ ೩೫೧

ಇದರ ಅರ್ಥವು ಪೂರ್ವದಲ್ಲೇ ವಿವೃತವಾಗಿದೆ.

"ನಿಷೇಕೆ ಗರ್ಭ ಸಂಸ್ಕಾರೇ ಜಾತಕರ್ಮ ಕ್ರಿಯಾಸು ಚ।
ವಿಧಿವತ್ಸಂಸ್ಕೃತಾ ಮಂತ್ರೈಃ ಚೀರ್ಣವ್ರತಸಮಾಪನಾ
ಶ್ರೋತ್ರಿಯಾ ಇತಿತೇ ಜ್ಞೇಯಾಃ ಶಾಖಾಪಾರಾಶ್ಚಯೇ ದ್ವಿಜಾಃ"
ಬೋಧಾ ಸೂತ್ರ. ಪುಟ ೧೧೩

ಶ್ರೋತ್ರಿಯ ತಾವಲಾಂಬಿತ ಸ್ವಧರ್ಮಗಳು :-

ಗರ್ಭಾಧಾನಾದಿ ಸಂಸ್ಕಾರಗಳಲ್ಲಿ ಜಾತಕ, ಚೌಲಾದಿಕ್ರಿಯಾಗಳಲ್ಲಿ ವಿಧಿಗನು ಸಾರವಾಗಿ ಮಂತ್ರಗಳಿಂದ ಸಂಸ್ಕಾರ ಹೊಂದಿದವನು, ಏಕಾದಶೀ, ಚಾತುರ್ಮಾಸ್ಯ ಮುಂತಾದ ವ್ರತಾನುಷ್ಠಾನ ಉಳ್ಳವನು, ಸ್ವಶಾಖಾವನ್ನು ಬಿಡದೆ ಅಧ್ಯಯನ ಮಾಡಿದವನು, ಶ್ರೋತ್ರಿಯನೆಂದು ತಿಳಿದುಕೊಳ್ಳಬೇಕೆಂಬುದು ಭೋಧಾಯನರ ಅಭಿಪ್ರಾಯ. ಹೀಗೆ ಶ್ರೋತ್ರಿಯನಾದ ಬ್ರಾಹ್ಮಣನೇ ಪಾಠ-ಪ್ರವಚನ, ದಾನ-ಪ್ರತಿಗ್ರಹ, ಅಧ್ಯಯನ-ಅಧ್ಯಾಪನ, ಯಜನ-ಯಾಜನ, ಗುರುತ್ವದಿಂದ ಸನ್ನಿಹಿತಾಸನ್ನಿಹಿತ, ಶಿಷ್ಯರಿಗೆ ಉಪದೇಶ ಮೊದಲಾದುವುಗಳಿಗೆ ಅಧಿಕಾರಿಯಾಗುವನು. ದಾನ ಮಾಡುವಾಗಲೂ "ಶ್ರೋತ್ರಿಯಾಯ ಕುಟುಂಬಿನೇ" ಎಂದೇ ಸಂಕಲ್ಪವಿರುತ್ತದೆ. ಶ್ರೋತ್ರಿಯನಲ್ಲದವನಿಗೆ ಮಾಡಿದ ದಾನವು ಊರಿನಲ್ಲಿ ಮಾಡಿದ ಹೋಮದಂತೆ ವ್ಯರ್ಥ ಹಾಗೂ ಅನರ್ಥಕಾರಿಯಾಗುತ್ತದೆ.

ಪಾಠ-ಪ್ರವಚನ, ಗುರುತ್ವಾದಿ ವಿಷಯದಲ್ಲಿ ಶ್ರೀ ಮದಾನಂದ ತೀರ್ಥರು ಬ್ರಹ್ಮಸೂತ್ರ ಭಾಷ್ಯದಲ್ಲಿ,

ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ (ಮಂಡೂಕ ೧-೨-೧೨.)

ಸರ್ವೋತ್ತಮನು ಆಗಮೈಕಗೋಚರನಾದ ಶ್ರೀಮನ್ನಾರಾಯಣನ ಜ್ಞಾನ ಆಗಬೇಕಾದರೆ ಕೈ ಮುಗಿದು ಅಥವಾ ಸಮಿತ್ತು ಹಿಡಿದು ಶ್ರೋತ್ರಿಯ ಬ್ರಾಹ್ಮಣನಾದ, ಶ್ರೀಹರಿಯಲ್ಲಿ ನಿರವಧಿಕಭಕ್ತಿಯುಳ್ಳ ಗುರುವನ್ನು ಶರಣು ಹೊಂದಬೇಕು. ಆದಕಾರಣ ಮೋಕ್ಷ ಸಾಧನವಾದ ಬ್ರಹ್ಮಜ್ಞಾನವಾಗಬೇಕಾದರೆ ಕರ್ಮ, ವಿದ್ಯಾ, ಸಂಸ್ಕಾರಗಳಿಂದಯುಕ್ತವಾದಂತಹಾ ಅಂತರಿಕ ಮತ್ತು ಬಾಹ್ಯ ಚಿನ್ಹೆಗಳಿಂದ ಕೂಡಿದ ಯೋಗ್ಯ ಶ್ರೋತ್ರಿಯ ಬ್ರಾಹ್ಮಣನನ್ನು ಸ್ವೀಕರಿಸಿ ತಾನೂ ತಾದೃಶ ಲಕ್ಷಣವನ್ನು ಸಂಪಾದಿಸಬೇಕು,

ಸತ್ಕರ್ಮದ ಪ್ರಾಧಿವಾ :—

ಇನ್ನು "ಕರ್ಮ" ಎಂದರೆ ಯಜ್ಞ, ಯಾಗ ಇವು ಮಾತ್ರವಲ್ಲ. ಅಥವಾ ಅತಿಯಾಗಿ ಕೇವಲ ಮಡಿ ಮಾಡುವುದಲ್ಲ. ಕಿಂತು ಸ್ನಾನ, ಸಂಧ್ಯಾವಂದನಾ, ಜಪ, ಉಪಾಕರ್ಮಾದಿ ಹೋಮ, ದೇವತಾರ್ಚನೆ, ಅಗ್ನಿಕಾರ್ಯ, ವೈಶ್ವದೇವ, ಬಲಿ ಹರಣ, ಬ್ರಹ್ಮಯಜ್ಞ ಇವೆಲ್ಲಾ "ಕರ್ಮ" ಎಂದೇ ಕರೆಸಲ್ಪಡುತ್ತದೆ. ಈ ಎಲ್ಲಾ ಕರ್ಮಗಳೂ ಅತ್ಯಾವಶ್ಯಕವಾಗಿವೆ.

ಯದ್ಯಪಿ ಬಹುದ್ರವ್ಯಸಂಪತ್ಸಂಪಾದ್ಯಮಾನವಾದ ದೊಡ್ಡ ಯಜ್ಞಗಳನ್ನು ಮಾಡದಿದ್ದರೆ ದೋಷ ಬರದೆ ಇದ್ದರೂ ಈ ಪೂರ್ವೋಕ್ತ ಕರ್ಮಲೋಪಕ್ಕೆ ಅವಶ್ಯ ವಾಗಿ ಪ್ರತ್ಯವಾಯಗಳುಂಟು. ಮಡಿಯನ್ನೂ ಸಹ ಮನಃಶುದ್ಧಿಕರ ಕರ್ಮದ ಅಂಗ ವಾಗಿಯೇ ಮಾಡಬೇಕು.

"ನತಿಷ್ಠತಿ ತುಯಃ ಪೂರ್ವಾಂ ನೋಪಾಸ್ತೇಯಶ್ಚಿಪಶ್ಚಮಾಂ ಸ ಶೂದ್ರ
ವತ್ ಬಹಿಷ್ಕಾರ್ಯಃ ಸರ್ವಸ್ಮಾತ್ ದ್ವಿಜ ಕರ್ಮಣಃ ॥ (ಮನು ೨. ೧೦೩)

ಯಾವನು ವಿಧಿಪ್ರಕಾರವಾಗಿ ಸಂಧ್ಯಾವಂದನೆ ಮಾಡುವುದಿಲ್ಲವೋ ಅವನು (ಶೂದ್ರನಂತೆ) ಸರ್ವಕರ್ಮ ಬಹಿಷ್ಕೃತನಾಗುತ್ತಾನೆ. ಹೀಗೆ ಆಯಾ ಕರ್ಮಗಳಿಗೆ ಪ್ರಾಶಸ್ತ್ಯವು ಅಲ್ಲಲ್ಲಿ ಹೇಳಿದ್ದಾರೆ. ಗ್ರಂಥ ವಿಸ್ತಾರ ಭಯದಿಂದ ಇಲ್ಲಿ ಹೇಳು ವುದಿಲ್ಲ. ಪೂರ್ವೋಕ್ತ ಎಲ್ಲಾ ಸತ್ಕರ್ಮಗಳನ್ನೂ ಮಾಡಲೇಬೇಕು.

ಶಿಖಾ ಹಾಗೂ ಕರ್ಮಗಳ ಸಂಬಂಧ :—

ಈ ಎಲ್ಲಾ ಕರ್ಮಗಳೂ ಸಹ ವಿಧ್ಯುಕ್ತವಾಗಿದ್ದು ಎಲ್ಲಾ ಕರ್ಮಗಳ ಪ್ರಾರಂಭದಲ್ಲಿಯೂ ಆಚಮನವು ವಿಧಿಸಲ್ಪಟ್ಟಿದೆ. ಆಚಮನ ರಹಿತವಾದ ಯಾವುದೇ ಕರ್ಮವು ಸಾಂಗವಾಗುವುದಿಲ್ಲ. ಆದ್ದರಿಂದ ಆಚಮನ ಕಾರ್ಯದ ಮಹತ್ವವನ್ನೂ ಸ್ವಲ್ಪ ವಿಮರ್ಶಿಸಿದರೆ ಪೂರ್ವೋಕ್ತ ಸರ್ವ ಕರ್ಮಗಳಿಗೂ ಹಾಗೂ ಶಿಖೆಗಳಿಗೂ ಇರುವ ನಿಕಟ ಸಂಬಂಧ ತಿಳಿಯುತ್ತದೆ.

ಕೃತ್ವಾಥ ಶೌಚಂಪ್ರಕ್ಷಾಲ್ಯ ಪಾದೌಹಸ್ತಾಚ ಮೃಜ್ಜಲೈಃ । ನಿಬದ್ಧ ಶಿಖ
ಕಚ್ಛಸ್ತು ದ್ವಿಜ ಆಚಾಮಮಾಚರೇತ್ ॥ ಸ್ಮೃಚಂ ಅಹ್ನಿಕ ಕಾಂಡ
ವೃದ್ಧಪರಾಶರ ಪುಟ-೨೫೨

ಶೌಚಾದಿಗಳನ್ನು ಮಾಡಿ ಕೈಕಾಲು ತೊಳೆದು (ಸ್ನಾನ ಮಾಡಿ) ಶಿಖಾ ಗಂಟು ಹಾಕಿ, ಕಚ್ಚೆ ಹಾಕಿಕೊಂಡಿರುವ ಬ್ರಾಹ್ಮಣನು (ದ್ವಿಜ ಶಬ್ದ ಪ್ರಯೋಗದಿಂದ ಸ್ವಾರಸ್ಯವಾಗಿ ಸುಸಂಸ್ಕೃತ ಬ್ರಾಹ್ಮಣ ಎಂಬ ಅರ್ಥವು ಸೂಚಿತವಾಗುತ್ತದೆ) ಆಚ ಮನ ಮಾಡಬೇಕು.

ಒಂದು ವೇಳೆ ಶಿಖಾ ಇರದಿದ್ದರೆ ಆಚಮನಕ್ಕೆ ಅಧಿಕಾರವಿಲ್ಲ. ಆಚಮನ ಇಲ್ಲದಿದ್ದರೆ ತತ್ಪೂರ್ವಕ ಕರ್ಮ ಹೇಗೆ ಸಂಭವಿಸುವುದು ? ಆಚಮನದ ಕ್ರಮವು ಬೋಧಾಯನ ಗೃಹ್ಯಸೂತ್ರದಲ್ಲಿ ತಿಳಿಸಲ್ಪಟ್ಟಿದೆ. ಚತುರ್ಥ ಪ್ರಶ್ನೆ, ೭ನೇ ಅಧ್ಯಾಯ ೯ನೇ ಸೂತ್ರ.

ಆಚಮನ ಕ್ರಮ :—

"ಅಥಾತ ಆಚಮನವಿಧಿಂ ವ್ಯಾಖ್ಯಾಸ್ಯಾಮಃ :— ಪ್ರಾಙ್ಮುಖ, ಉದಙ್ಮುಖೋವಾ, ಬದ್ಧಶಿಖೋ, ಯಜ್ಞೋಪವೀತೀನೋಷ್ಣಾಭಿರ್ನ ಕ್ಷಾರಾಭಿರ್ನ ವಿವರ್ಣಾಭಿಃ ನ ದುರ್ಗಂಧರಸಾಭಿರ್ನಸಫೇನಾಭಿರ್ನಚೈಕ ಹಸ್ತಾಭಿರ್ನ ಬಹಿರ್ಜಾನಾಭಿರ್ನ ವಿರಳಾಂಗುಲೀಬಿರ್ನ ಬುದ್ಬುಧಾನಭಿರ್ದ ತಿಷ್ಠನ್ ನ ಹಸನ್ ನ ಜಲ್ಪನ್ನವಿಲೋಕಯನ್ನ ಪ್ರಹ್ವಃನ್ನ ಪ್ರಣತಃನ ರೋಚನ್" ‖

ಅಥ :— ಸಂಸ್ಕಾರಾದಿಗಳಿಂದ ಕರ್ಮಾಧಿಕಾರದ ಪ್ರಾಪ್ತಿಯಾದ ಮೇಲೆ ಅತಃ=ಕರ್ಮಸಿದ್ಧಿ ದ್ವಾರಾ ಪುಣ್ಯ ಫಲ ಪ್ರಾಪ್ತಿಯಿಂದ ಮೋಕ್ಷವೆಂಬ ಫಲ ಉಂಟಾಗುವುದರಿಂದ, ಆಚಮನ ವಿಧಿಂ=ಆಚಮನ ಕ್ರಮವನ್ನು ವ್ಯಾಖ್ಯಾನ ಮಾಡುವ. ಪೂರ್ವಾಭಿಮುಖ ಅಥವಾ ಉತ್ತರಾಭಿಮುಖನಾಗಿಯೇ ಕುಳಿತು ಶಿಖಾಗಂಟು ಹಾಕಿ, ಒಳ್ಳೆಯ ಕಡಿದು ಹೋಗದಿರುವ, ಜನಿವಾರ ಧರಿಸಿ, ಬಿಸಿಯಿಲ್ಲದ, ಒಗರು ರಸ ವಿಲ್ಲದ, ಕೆಟ್ಟ ಬಣ್ಣವಿಲ್ಲದ, ದುರ್ಗಂಧ ಮತ್ತು ದುಷ್ಟ ರಸವಿಲ್ಲದ, ನೊರೆಯಿಂದ ಕೂಡದ, ಒಳ್ಳೆಯ ಶುದ್ಧ ನೀರಿನಿಂದ, ಬಲಗೈಯಿಂದ, ದೂಷಿತವಲ್ಲದೆ, ಶುಚಿಯಾಗಿ, ಮೊಳಕಾಲು ದಾಟದೆ, (ಕೈಯನ್ನು ಮೊಳಕಾಲಿನಿಂದ ಹೊರಗೆ ಚಾಚದೆ) ಬೆರಳುಗಳನ್ನಗಲಿಸದೆ, ನೀರಿನಲ್ಲಿ ಗುಳ್ಳೆ ಇಲ್ಲದಂತೆಮಾಡಿ ನಿಂತುಕೊಳ್ಳದೆ, (ಕುಳಿತು) ನಗದೆ, ಮಾತನಾಡದೆ, ಎಲ್ಲಿಯೋ ನೋಡದೆ, ಬಗ್ಗದೆ, ಪರರು ನಮಸ್ಕಾರ ಮಾಡದಿರುವಾಗ, ಆಶೀರ್ವಾದ ಮಾಡದಿರುವಾಗ ಆಚಮನ ಮಾಡಬೇಕು. ಈ ವಿಧಿಯು ನಿಷೇಧ ಮುಖವಾಗಿಯೇ ಆಚಮನ ಕ್ರಮವನ್ನು ತಿಳಿಯಪಡಿಸುತ್ತದೆ.

ಯಜ್ಞೋಪವೀತಧಾರಣೆಯಾದ ಮೇಲೆ (ಉಪನಯನವಾದ ಮೇಲೆ) ಅದನ್ನು ತೆಗೆದರೆ ಯಾವ ಕರ್ಮವೂ ಹುಟ್ಟಲಾರದು. ಅದರಂತೆ ಪತ್ಪೂರ್ವದಲ್ಲಿಯೇ ಸಂಭವಿಸಿದ ಚೂಡಾ ಸಂಸ್ಕಾರದಿಂದ ಚೂಡಾ (ಶಿಖಾ) ಧರಿಸಿದ ಮೇಲೆ ಅದನ್ನು ತೆಗೆದರೆ ಯಾವ ಕರ್ಮವೂ ಹುಟ್ಟಲಾರದು. ಈ ವಿಧದಿಂದ ನಿಯಮೋಲ್ಲಂಘನೆ ಮಾಡದೆ, ಮಾಡಲ್ಪಟ್ಟ ಆಚಮನವು ಬಹು ಪುಣ್ಯಕರ ಹಾಗೂ ಬಹು ಶ್ರೇಯಸ್ಕರವಾಗುವುದು.

ಆಚಮನದ ಪ್ರಾಶಸ್ತ್ಯ :--

"ಬ್ರಾಹ್ಮಣಸ್ಯ ದಕ್ಷಿಣೇಹಸ್ತೇ ಪಂಚತೀರ್ಥಾ ನಿಭವಂತಿ । ಅಂಗುಲೀಮಧ್ಯೇ ದೇವ ತೀರ್ಥಂ ಅಂಗುಲ್ಯಗ್ರೇ ಆರ್ಷಂ ತೀರ್ಥಂ ಮಧ್ಯೇ ಅಗ್ನಿತೀರ್ಥಂ ಅಂಗುಷ್ಠತರ್ಜ

ನ್ಯೋರ್ಮಧ್ಯೆ ಪೈತೃಕತೀರ್ಥಂ ಅಂಗುಷ್ಟತಲೆ ಅತಿಹೃತ್ಯ ಪಶ್ಚಾಲ್ಲೇಖ್ಯಂ ತದ್ಬ್ರಹ್ಮ ತೀರ್ಥಂ ||೨|| ಮಾಷಮಗ್ನಂ ತು ತನ್ಮಾತ್ರಂ ಪ್ರತಿಗೃಹ್ಯ ತ್ರಿಃಪಿಬೇದಪಃ ಗೋಕರ್ಣ ವದ್ಧಸ್ತೇನ ತ್ರಿರಾಚಮೇತ್ ||೩||

"ಪ್ರಥಮಂಯುತ್ಪಿಬತಿ ತೇನ ಋಗ್ವೇದಂ ಪ್ರೀಣಾತಿ | ಯದ್ವಿತೀಯಂ ತೇನ ಯಜುರ್ವೇದಂ ಪ್ರೀಣಾತಿ | ಯತ್ತೃತೀಯಂ ತೇನ ಸಾಮವೇದಂ ಪ್ರೀಣಾತಿ|"

"ಸರ್ವಾದೇವತಾಃ ಪ್ರೀಣಂತ್ಯಗ್ನಿರ್ವಾಯುಃ ಪ್ರಜಾಪತಿರ್ಚಂದ್ರೌಮಘ ವಾನ್ ಇತಿ ವೈದಿಕಾಃ" ||೪|| (ಬೊಧಾ, ಸೂತ್ರ, ೧ನೇ ಪ್ರಶ್ನೆ ೭-೩-೨-೩-೪)

ಈ ಆಚಮನವು ಬಹು ಪವಿತ್ರವಾದದ್ದು ಹಾಗೂ ಮಹತ್ವ ಉಳ್ಳದ್ದೂ ಆಗಿದೆ. ಏಕೆಂದರೆ "ಬ್ರಾಹ್ಮಣನ ಬಲಗೈಯಲ್ಲಿ ಐದು ತೀರ್ಥಗಳು ಇರುತ್ತವೆ. ಬೆರಳುಗಳ ಮಧ್ಯೆ ದೇವ ತೀರ್ಥವು, ಬೆರಳುಗಳ (ಅಗ್ರ) ಮುಂಭಾಗದಲ್ಲಿ ಋಷಿ ತೀರ್ಥವು, ಮಧ್ಯೆ ಅಗ್ನಿ ತೀರ್ಥವು, ಹೆಬ್ಬೆರಳು ಮತ್ತು ತೋರ್ಬೆರಳುಗಳ ಮಧ್ಯೆ ಪಿತೃ ತೀರ್ಥವು, ಹೆಬ್ಬೆರಳಿಗೆ ತಳಭಾಗದಲ್ಲಿ ಹಾದುಹೋಗುವ ರೇಖೆಯಲ್ಲಿ ಬ್ರಹ್ಮ ತೀರ್ಥವು ಇರುತ್ತದೆ. ಉದ್ದಿನ ಕಾಳು ಮುಳುಗುವಷ್ಟು ಮಾತ್ರ ಗೋಕರ್ಣಾ ಕೃತಿಯುಳ್ಳ ಬಲಗೈಯಲ್ಲಿ ನೀರು ಹಾಕಿಕೊಂಡು ಮೂರಾವರ್ತಿ ಪ್ರತ್ಯೇಕವಾಗಿ ಆಚ ಮನ ಮಾಡಬೇಕು. ಪ್ರಥಮ ಆಚಮನವು ಋಗ್ವೇದವನ್ನು ಸಂತೋಷಪಡಿಸು ತ್ತದೆ. ಎರಡನೆಯದು ಯಜುರ್ವೇದವನ್ನು, ಮೂರನೆಯದು ಸಾಮವೇದವನ್ನು ಹೀಗೆ ಎಲ್ಲ ದೇವತೆಗಳು ಅಗ್ನಿ, ವಾಯು, ಪ್ರಜಾಪತಿ, ಚಂದ್ರ, ಸೂರ್ಯ, ಇಂದ್ರ ಎಲ್ಲರೂ ಪ್ರೀತರಾಗುತ್ತಾರೆ ಎಂದು ವೈದಿಕಾಭಿಪ್ರಾಯ.

ಶಿಖಾ-ಆಚಮನ :—

"ಸಪ್ರಣವ ಗಾಯತ್ರ್ಯಾ ಶಿಖಾಂಬಧ್ವಾ ಆಚಮೇತ್" "(ಆಚಾರಾದರ್ಶಃ)

ಓಂಕಾರ ವ್ಯಾಹೃತಿ ಮಂತ್ರಯುಕ್ತವಾದ ಗಾಯತ್ರೀ ಮಂತ್ರದಿಂದ ಶಿಖೆ ಯನ್ನು ಗಂಟುಹಾಕಿಕೊಳ್ಳುವುದು. ನಂತರ ಆಚಮನ ಮಾಡಬೇಕು.

ಚಿದ್ರೂಪಿಣಿ ಮಹಾಮಾಯೇ ದಿವ್ಯತೇಜಃ ಸಮನ್ವಿತೇ | ತಿಷ್ಠದೇವಿ ಶಿಖಾ ಬಂಧೆ ತೇಜೋವೃದ್ಧಿಂ ಕುರುಷ್ವಮೇ || (ಆಹ್ನಿಕಕಾರಿಕಾ)

"ಜ್ಞಾನ ಸ್ವರೂಪಳಾದ, ತೇಜಃಪುಂಜಳಾದ, ಮಾಯಾರೂಪಳಾದ ಗಾಯ ತ್ರಿಯೇ ನನ್ನ ಶಿಖೆಯ ಗಂಟಿನಲ್ಲಿ ಬಂದು, ಇದ್ದು ನನ್ನ ತೇಜಸ್ಸನ್ನು ಅಭಿವೃದ್ಧಿ ಗೊಳಿಸು" ಎಂದು ಪ್ರಾರ್ಥಿಸಿ ಮುಂದೆ ಉದ್ದಿಷ್ಟಕರ್ಮ ಮಾಡಬೇಕು.

ಶಿಖಾರಾಹಿತ್ಯದ ಅನರ್ಥ :—

ಹೀಗೆ ಶಿಖಾ ಇಟ್ಟುಕೊಳ್ಳದೇ ಅಲಂಕಾರಕ್ಕಾಗಿ ಬೇರೆ ವಿಧ (ಕ್ರಾಫ್) ಧಾರಣೆ

ಮಾಡಿದವರು ಸರ್ವ ಕರ್ಮಗಳಿಗೂ ಅನಧಿಕಾರಿಗಳಾಗಿರುತ್ತಾರೆ. ಹಾಗೂ ಹಠಾತ್ ಮಾಡಿದರೆ ಅದು ವ್ಯರ್ಥವಾಗುತ್ತದೆ. ಸತ್ಕರ್ಮದಿಂದುಂಟಾಗುವ ಸತ್ಫಲವನ್ನು ರಾಕ್ಷಸರೇ ಮೊದಲಾದವರು ಅಪಹರಿಸುತ್ತಾರೆ.

"ಅನೇನೋಪವೀತಂ ನಿತ್ಯಧಾರ್ಯಂ ಇತ್ಯುಕ್ತಂ ಭವತಿ ಅತಏವ ಭೃಗುಃ ಸದೋಪವೀತಿನಾ ಭಾವ್ಯಂ ಸದಾ ಬದ್ಧ ಶಿಖೇನಚ । ವಿಶಿಖೋನುಪವೀತಶ್ಚ ಯತ್ಕ ರೋತಿನ ತತ್ಕೃತಂ"॥ ಸ್ಮೃತಿ. ಚಿಂ. ಪುಟ ೮೪.

ಉಪನಯನವಾದ ಮೇಲೆ ಯಾವಾಗಲೂ ಶಿಖಾಯಜ್ಞೋಪವೀತಗಳನ್ನು ಧರಿಸಿರಲೇ ಬೇಕು. ಶಿಖಾ ಯಜ್ಞೋಪವೀತವಿಲ್ಲದೆ ಸಂಧ್ಯಾವಂದನಾದಿಯಾವ ಕರ್ಮ ಕ್ಷಣ ಬಿಡದೆ ಮಾಡಿದರೂ ಅದು ಮಾಡಲ್ಪಟ್ಟಿಲ್ಲವೆಂದೇ ಅರ್ಥ. ಇದೇ ಶ್ಲೋಕ ವ್ಯಾಖ್ಯಾನ ಮಾಡುವಾಗ ಆಚಾರೇಂದುಕಾರನು "ಅತ್ರ ಸದೇತ್ಯನೇನ ಉಪವೀತ ಧಾರಣಾದೇಃ ಪುರುಷಾರ್ಥತ್ವಂ ಪ್ರತಿಪಾದಿತಂ । ವಿಶಿಖಃ ಇತ್ಯಾದಿನಾ ಕರ್ಮಾಂ ಗತ್ವಂ ಚ॥" ಎಂದು ಶಿಖೆಯನ್ನು ಕರ್ಮದ ಪ್ರಧಾನ ಅಂಗವೆಂದಿದ್ದಾನೆ.

ಶಿಖಾ ಅವಶ್ಯ :—

"ಜಟಿಲಃ" (ಆಪಸ್ತಂಬ ಧರ್ಮಸೂತ್ರ ೨ ಖಂಡ ೩೧ನೇ ಸೂತ್ರ) ಸರ್ವಾನ್ ಕೇಶಾನ್ ಜಟಾಂ ಕತ್ವಾಬಿಭೃಯಾತ್ ಶಿಖಾ ಜಟೋವಾ ವಾಪಯೇದಿತರಾನ್ (೩೨ನೇ ಸೂತ್ರ) ಅಥವಾ ಶಿಖಾಂ ಏವ ಜಟಾಂ ಕೃತ್ವಾ ಇತರಾನ್ಕೇಶಾನ್ ವಾಪಯೋ ಸ್ನಾಪಿತೇನ (ಉಜ್ವಲಾ) ಆಪಸ್ತಂಬ ಧರ್ಮ ಸೂತ್ರದಲ್ಲಿ ಕರ್ಮಾಧಿಕಾರ ಖಂಡ ವಾದ ೨ನೇ ಖಂಡದಲ್ಲಿ "ಜಟಿಲಃ" ಎಲ್ಲಾ ತಲೆಗೂದಲುಗಳನ್ನೂ ಜಟಾ ಮಾಡಿ ಕೊಂಡಿರಬಹುದು. (ಋಷಿಗಳು ಹಾಗೆ ಮಾಡುತ್ತಿದ್ದರು.) ಅಂದರೆ ಕ್ಷೌರ ಕರ್ಮವೇ ಸುತರಾಂ ಇಲ್ಲ. ಉಪಪುಕ್ಷ, ಶ್ಮಶ್ರು, ಕೇಶ ಯಾವುದನ್ನೂ ವಪನ ಮಾಡುತ್ತಿರಲಿಲ್ಲ. ಅಥವಾ ಋಷಿಗಳಂತೆ ಆಯುಷ್ಕರ್ಮಇಲ್ಲ ದಿರಲು ಕಷ್ಟವಾದರೆ (ಸಾಧ್ಯವಿರದಿದ್ದರೆ) "ಶಿಖಾ ಜಟೋವಾ" ಶಿಖಾವನ್ನೇ ಜಟಾ ಮಾಡಿಕೊಂಡು, ವಾಪ ಯೇದಿತರಾನ್ ಮಿಕ್ಕುಳಿದ ಕೂದಲುಗಳನ್ನು ನಾಪಿತನಿಂದ ವಪನ ಮಾಡಿಸಬೇಕು.

ಶಿಖಾಲಕ್ಷಣ:—

ಉಪಪಕ್ಷ=ಗಲ್ಲ ಮತ್ತು ಮುಖದಲ್ಲಿರುವ ಕೂದಲುಗಳು, ಶ್ಮಶ್ರು=ಮೀಸೆ, ಕೇಶ=ತಲೆಕೂದಲು ಇವೆಲ್ಲವನ್ನೂ ತಗೆಸಬೇಕು. ಶಿಖಾ ಮಾತ್ರ ಇಟ್ಟುಕೊಳ್ಳ ಬೇಕು. ಶಿಖಾ ಎಂದರೆ ಗೋಪಾದ ಮಾತ್ರ ಪರಿಮಿತವಾದ ಕೂದಲು ಭಾಗ. ಋಷ್ಯಾದಿಗಳ ಅನುಸಾರ ಹಿಂದೆ, ಮುಂದೆ, ಬಲ, ಎಡಭಾಗಗಳಲ್ಲಿ ಎಲ್ಲಿ ಬೇಕಾ ದರೂ ಬಿಡಬಹುದು ಎಂಬುದಾಗಿ ವಿಧಿಯಿದ್ದರೂ ನಮ್ಮ ದೇಶದಲ್ಲಿ ಹಿಂದೆ ಮಾತ್ರ

ಬಿಡುವ ಸಂಪ್ರದಾಯ ಬಂದಿದೆ. ವೇದದಲ್ಲಿ "ಗೋಕ್ಷುರವಚ್ಛಿಖಾ" ಎಂದಿರುವುದರಿಂದ ಸಾಧಾರಣವಾದ ಪರಿಮಿತಿಯನ್ನು ಸ್ವಯಂ ಮಾಡಿಕೊಳ್ಳಬಹುದು. ಅಥವಾ ಶತಾನಾಂಸಪ್ತತ್ರಿಗುಣಂ ಅಷ್ಟೋತ್ತರಮಥಾಪಿವಾ । ಕೇಶಾನಾಮಪಿ ಸಂಖ್ಯಾಸಾಂ ಶಿಖೈಕಾಪರಿಕೀರ್ತಿತಾ"॥ಅಪ ಸೂ. ದ್ವಿ. ಪ್ರಶ್ನ ಪಂಚಮಾಧ್ಯಾಯ ಪುಟ ೩೯. ನೂರರ ಇಪ್ಪತ್ತೊಂದು+ಎಂಟು=೨೯೦೦-ಕೂದಲುಗಳ ಅಂದಾಜು ಎಣಿಕೆಯುಳ್ಳ ಒಂದು ಭಾಗಕ್ಕೆ ಶಿಖಾ ಎಂದು ಹೆಸರು. ಇದೊಂದು ಸ್ಥೂಲ ಪರಿಮಿತಿಯ ಪರಿಚಾಯಕ ಮಾತ್ರ. ಒಂದು ಗೋಪಾದ ಸುತ್ತಳತೆಯುಳ್ಳ ಕೂದಲುಗಳನ್ನು ನಮ್ಮ ಸಂಪ್ರದಾಯಕ್ಕನುಸಾರ ಇಟ್ಟುಕೊಂಡು ಉಳಿದ ಕೂದಲುಗಳನ್ನು ವಪನ ಮಾಡಿಸಿದರೆ ಅದು ಪೂರ್ವೋಕ್ತ ೨೯೦೦ ಕೂದಲುಗಳನ್ನು ಇಟ್ಟುಕೊಂಡಂತಾಗುವುದು.

ಶ್ರಾದ್ಧಾರ್ಹ ಬ್ರಾಹ್ಮಣ—ಶಿಖಾ :—

ಈ ಶಿಖೆಯೇ ಬ್ರಾಹ್ಮಣರ ಪ್ರಥಮ ಲಕ್ಷಣವಾಗಿರುತ್ತದೆ. ಶ್ರಾದ್ಧಕ್ಕೆ ಆಮಂತ್ರಣಾರ್ಹ ಬ್ರಾಹ್ಮಣರ ಗಣನೆ ಮಾಡುವಾಗ "ಶಿಖಿಭ್ಯೋ ಧಾತುರಕ್ತೇಭ್ಯೋ ತ್ರಿದಂಡಿಭ್ಯಶ್ಚದಾಪಯೇತ್" (ಬ್ರಹ್ಮಾಂಡ ಪುರಾಣಂ) ಸ್ಮೃ-ಚಂ-ಪುಟ ೧೫೭) ಶ್ರಾದ್ಧದಲ್ಲಿ ಶಿಖಾವುಳ್ಳ ಸಾಧಾರಣ ಬಣ್ಣ (ಅಂದರೆ ಅತಿ ಕಪ್ಪು ಅಥವಾ ಅತಿ ಕೆಂಪು ಅಲ್ಲದ) ಗೃಹಸ್ಥ ಬ್ರಾಹ್ಮಣನಿಗೋ ಅಥವಾ ತ್ರಿದಂಡಿ ಸನ್ಯಾಸಿಗೋ ದಾನ ಕೊಡಿಸಬೇಕು.

ಒಂದು ವೇಳೆ ಯಾವುದಾದರೂ ಕಾರಣಾಂತರದಿಂದ ಬ್ರಹ್ಮಚರ್ಯದಲ್ಲಿ, ಪರಸ್ತ್ರೀ ದರ್ಶನ, ಸಂಭೋಗ ಮುಂತಾದ ಅಪರಾಧವು ಸಂಭವಿಸಿದರೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಆಗ ಶಿಖಾ ಸಹಿತವಾಗಿ ಮುಂಡನ ಮಾಡಿಸಬೇಕು. ಇದಕ್ಕೆ "ಸಕ್ಷೌರ ಪ್ರಾಯಶ್ಚಿತ್ತ" ಎಂದು ಹೆಸರು.

"ಸಶಿಖಂ ವಪನಂ ಕಾರ್ಯಂ ಅಸ್ನಾನಾತ್ ಬ್ರಹ್ಮಚಾರಿಣ;--ಆಶರೀರ ವಿಮೋಕ್ಷಾತ್ತು ಬ್ರಹ್ಮಚರ್ಯಂ ನ ಚೆತ್ಭವೇತ್ ॥ )ಕಾತ್ಯಾಸ್ಮೃ, ಸ್ಮೃತಿ ಚಂ೧-೬

"ಶುಕ್ಲಾಂ ಬರಧರೋ ನಿಚಕೇಶಸ್ಮಶ್ರು ನಖಃ ಶುಚಿಃ (ಯಾಜ್ಞಾ, ಸ್ಮೃ ೪೧-೧-೧೩೧) ನೀಚಂ--ನಿಕೃತ್ತಂ=ವಪನ ಮಾಡಿಸಲ್ಪಟ್ಟ ಕೇಶ ಮತ್ತು ಮುಖದ ಕೂದಲುಗಳು, ಮೀಸೆಗಳು ಉಳ್ಳವನಾಗಬೇಕು. (ಅಂದರೆ ಶಿಖಾವನ್ನುಳಿದು ಮಿಕ್ಕ ಕೂದಲುಗಳನ್ನೆಲ್ಲ ವಪನ ಮಾಡಿಸಬೇಕೆಂದು ಭಾವ.) ಮತ್ತು ಶ್ವೇತ ವಸ್ತ್ರವನ್ನು (ಶುಭ್ರವಾದ್ದು) ಧಾರಣ ಮಾಡಿರಬೇಕು. ಇವೆಲ್ಲ ಸ್ನಾತಕಗೃಹಸ್ಥನ ಲಕ್ಷಣ ಎಂಬುದು ಯಜ್ಞವಲ್ಕ್ಯರ ಅಭಿಪ್ರಾಯ.

ಶಿಖಾ ಬಂಧನಂ :—

ಬ್ರಾಹ್ಮಣನು ' ಶಿಖಾ ಇಟ್ಟುಕೊಳ್ಳುವುದು ಮಾತ್ರವಲ್ಲನೆ ಅದನ್ನು ನಿತ್ಯ ಗಂಟು ಹಾಕಿಕೊಳ್ಳುವುದರಲ್ಲಿಯೂ ವಿಧಾನವಿದೆ.

"ಶಿಖಿವಚ್ಛಿಖಯಾ ಭಾವ್ಯಂ ವಾಮಾವರ್ತನಿಬದ್ಧಯಾ । ಪ್ರದಕ್ಷಿಣಂ ದ್ವಿರಾವೃತ್ಯ ಬ್ರಹ್ಮಾವರ್ತಮಿತೀರಿತಂ" ಕಘುವಿಸ್ಮೃತಿ, ಆಚಾರೇಂದು ಪುಟ-೮.

ಶಿಖಾವನ್ನು ಬೆಂಕಿಯೆಂದು ತಿಳಿಯಬೇಕು. ಆ ಶಿಖೆಯನ್ನು ಎಡದಿಂದೊಮ್ಮೆ ಸುತ್ತಿ ಪ್ರದಕ್ಷಿಣಾಕಾರವಾಗಿ ಎರಡು ಸಲ ಸುತ್ತಿ ಗಂಟು ಹಾಕಿದರೆ ಅದು ಬ್ರಹ್ಮಾವರ್ತವೆಂಬ ಹೆಸರುಳ್ಳ ಶಿಖೆಯಾಗುತ್ತದೆ.

ಶಿಖಾ ಯಾವುದು ? :—

"ವಿಪ್ರಾದಿಕಾನಾಂ ಖಲು ಮುಷ್ಟಿಮೇಯಕೇಶಾ ಶಿಖಾಸ್ಯಾದಧಿಕಾ ತತೋನ ದ್ವಿಧಾ ತ್ರಿಧಾ ವ್ಯೂಹ್ಯ ವಿಭಜ್ಯ ಬಂಧಃ ಹ್ಯಲ್ಪಾ ತತೋಲ್ಪಾಪಿನಲಂಬಿತಾಪಿ"—(ಸಂಧ್ಯಾರತ್ನ)—ಅಂದರೆ ಒಂದು ಮುಷ್ಟಿಯಲ್ಲಿ ಅಡಗುವಷ್ಟು ಕೂದಲುಗಳುಳ್ಳದ್ದೇ ಶಿಖಾ ಎಂದೆನಿಸುತ್ತದೆ, (ಒಂದು ಮುಷ್ಟಿಗಿಂತ ಹೆಚ್ಚಾಗಿ ಕೂದಲುಗಳಿರಬಾರದು. ಆ ಶಿಖಾವನ್ನು ಗಂಟು ಹಾಕಿಕೊಳ್ಳಬೇಕು. ಒಂದು ವೇಳೆ ಗಂಟು ಹಾಕಲು ಬರದೆ ಇರುವಷ್ಟು ಚಿಕ್ಕದಾಗಿ ಉದ್ದ ಸಾಲದಿದ್ದರೆ ಎರಡಾಗಿ ವಿಭಾಗಿಸಿ ಗಂಟು ಹಾಕಿಕೊಳ್ಳಬೇಕು. ಹಾಗೂ ಉದ್ದ ಸಾಲದಿದ್ದರೆ ಮೂರಾದರೂ ವಿಭಾಗ ಮಾಡಿ ಗಂಟು ಹಾಕಬೇಕು. ಅಲ್ಲದೆ ಬೀಳು ಬಿಡಬಾರದು. (ಜೋತಾಡುವಂತೆ ಇರಬಾರದು.)

ವೇದದ್ರಷ್ಟನಾದ ಪುರುಷನು, ಶಿಖಾವನ್ನು ಧರಿಸಿರುವವರೂ, ಧರಿಸಬೇಕಾದವರೂ, ಧರಿಸತಕ್ಕ ಕ್ರಮ. ಧರಿಸೋದರಿಂದ ಆಗುವ ಪ್ರಯೋಜನ, ಧರಿಸದಿದ್ದರೆ ಆಗುವ ನಷ್ಟ ಇತ್ಯಾದಿ ವಿಷಯಗಳನ್ನು ಹೇಳುತ್ತಾನೆ.

ವೈಶ್ವದೇವೇನ ಚತುರೋ ಮಾಸೊ ವ್ಯಂ ಜತೇಂದ್ರರಾಜಾನಃ । ತಾಂಛೀರ್ಷಂ ನಿ ಚಾವರ್ತಯಂತ ಪರಿ ಚ । ವರುಣ ಪ್ರಘಾಸೈಶ್ಚತುರೋಮಾಸೋ ವ್ಯಂಜತ ವರುಣ ರಾಜಾನಃ । ತಾಂಛೀರ್ಷಂ ನಿಶಾರ್ವತಯಂತ ಪರಿಚ ಸಾಕಮೇಧೈ ಚತುರೋ ಮೊಸೋ ವ್ಯಜಂತಸೋಮರಾಜಾನಃ । ತಾಂಛೀರ್ಷಂ ನಿ ಚಾವರ್ತಯಂತ ಪರಿ ಚ ।

ತತೋ ದೇವಾ ಅಭವನ್ ಪರಾಸುರಾಃ। ೩-೪-ಯಕ್‌ಗಳು. (ಕೃಷ್ಣ ಯಜುರ್ವೇದೀಯ, ತೈತರೀಯ ಬ್ರಾಹ್ಮಣ ಪ್ರಥಮಕಾಂಡ, ಪ್ರಪಾಟಕ ೫-೯-ಅನುವಾಕ

ದೇವತೆಗಳು ಮತ್ತು ಅಸುರರ ಯುದ್ಧದ ಆರಂಭದಲ್ಲಿ ದೇವತೆಗಳು ಒಂದು ಸಂವತ್ಸರದ ಯುದ್ಧದಲ್ಲಿ ಮೂರು ವಿಭಾಗ ಮಾಡಿ ನಾಲ್ಕು ಮಾಸಗಳಲ್ಲಿ ಇಂದ್ರಸ್ವಾಮಿಕ ದೇವತೆಗಳು, ವರುಣ ಸ್ವಾಮಿಕ ದೇವತೆಗಳು, ಚಂದ್ರ ಸ್ವಾಮಿಕ ದೇವತೆಗಳು ಹೀಗೆ ಪ್ರತ್ಯೇಕವಾಗಿ ಯುದ್ಧ ಮಾಡಿದರು. ಆಗ ಅವರು ತಮ್ಮ ತಮ್ಮ ತಲೆಯಲ್ಲಿ ಕೂದಲುಗಳನ್ನು ನಿವರ್ತನ ಮತ್ತು ಪರಿವರ್ತನ ಮಾಡಿದ್ದರು.

ಆದ್ದರಿಂದಲೇ ಅವರು ಅಸುರರನ್ನು ಗೆದ್ದರು.

ನಿರ್ವತನಂ=ವಪನೀಯಾನಾಂ ಕೇಶಾನಾಂ ಸ್ಥಾಪನೀಯೇಭ್ಯಃ ಶಿಖಾಗತ ಕೇಶೇಭ್ಯಃ ಪೃಥಕ್ಕರಣಂ ನಿವರ್ತನಂ । ಪರಿವರ್ತನಂ=ಪೃಥಕ್ಕೃತಾನಾಂ ವಪನಂ ಪರಿವರ್ತನಂ"—ಸಾಯಣ ಭಾಷ್ಯಂ=ಪುಟ=೨೫೨.

ಅಂದರೆ ವಪನ ಮಾಡಿಸಬೇಕಾದ ಕೇಶಗಳನ್ನು, ಇಡಬೇಕಾದ ಶಿಖಾಗತ ಕೇಶಗಳಿಂದ ಬೇರ್ಪಡಿಸುವುದು=ನಿವರ್ತನೆ, ಬಿಡಿಸಲ್ಪಟ್ಟ ಕೇಶಗಳ ವಪನವೇ ಪರಿವರ್ತನೆ. ಇದೆ ಅನುವಾಕದಲ್ಲಿ ಮುಂದೆ ಯಾರು ಹೀಗೆ ಮಾಡುತ್ತಾರೋ ಅವರು ಶತೃಗಳನ್ನು ಜಯಿಸುತ್ತಾರೆ, ವರ್ಷ ಪೂರ್ಣ ಅನ್ನವುಳ್ಳವರಾಗಿ ಹಸಿವೆಯನ್ನು ಪರಿಹರಿಸಿಕೊಳ್ಳುತ್ತಾರೆ. ಶತೃಗಳು ಅನ್ನಾಭಾವದಿಂದ ಹಸಿವೆಯಿಂದ ಸೋಲುವರು. ಎಂಬುದಾಗಿ ಪ್ರಶಂಶಿಸಿದ್ದಾರೆ.

ಪ್ರಯೋಜನ :—

ಯ ಏವಂ ವಿದ್ವಾನ್ ನಿವರ್ತಯತೇ ಪರೀ ಚ ದೇವತಾ ಏವಾ ಪ್ಯೇತಿ । ನಾಸ್ಯ ರುದ್ರಃ ಪ್ರಜಾ ಪಶೂನಭಿಮನ್ಯತೇ । ೧೮॥ ಅಂದರೆ ಸಾಯಣ ಭಾಷ್ಯದಲ್ಲಿ ಯ ಏವಂ ಚಾತುರ್ಮಾಸ್ಯಯಾಜೀ ಸ ಏಷ ದೇವಾನಾಂ ಸ್ವಭೂತ; ಸಲ್ಲೋಕೇ ಸಮಾನಿತಃ । ತಸ್ಮಾದೇವಂ ವಿದ್ವಾನ್ ಶಲಲ್ಯಾ ಕೇಶಾನ್ ಪೃಥಕ್ಕುರ್ಯಾತ್ । ಲೋಹಿತಾಯಸೇನ ವಪೇಚ್ಚ । ಸ ದೇವತಾ ಏವ ಪ್ರಾಪ್ನೋತಿ । ಅಸ್ಯ ಪ್ರಜಾಃ ಪಶೂನ್ ರುದ್ರಃ ನ ಹಿನಸ್ತಿ

ಯಾವನು ಪೂರ್ವೋಕ್ತ ಪ್ರಕಾರದಿಂದ ಚಾತುರ್ಮಾಸ್ಯಯಾಜಿಯಾಗುತ್ತಾನೋ ಅವನು ದೇವತೆಗಳ ಪಕ್ಷದವನಾಗಿ ಸ್ವರ್ಗಾದಿ ಲೋಕಗಳಿಗೆ ತರಲ್ಪಡುತಾನೆ. ಆದ್ದರಿಂದ ಯಾವ ವಿದ್ಯಾವಂತನಾದ ಪಂಡಿತನು ಶಲಲೀಯಿಂದ ಬೇರ್ಪಡಿಸಿ ಆಯಸಕ್ಷುರದಿಂದ ವಪನ ಮಾಡಿ (ನಿವರ್ತನ+ಪರಿವರ್ತನ ಮಾಡಿ) ಕೊಳ್ಳುತ್ತಾನೋ ಅವನು ದೇವತೆಗಳನ್ನು-ಹೊಂದುತ್ತಾನೆ. ಅವನ ಮಕ್ಕಳನ್ನು, ಪಶುಗಳನ್ನು ರುದ್ರನು ನಾಶ ಮಾಡುವುದಿಲ್ಲ. ಈ ಪ್ರತಿಯೊಂದು ಕ್ರಿಯಾ ವಿಶೇಷಗಳಲ್ಲೂ ಮಂತ್ರಗಳುಂಟು "ದೀರ್ಘಾಯುತ್ವಾಯ ವರ್ಚಸೇ" ಇತ್ಯಾದಿ....

ಇಷ್ಟು ಮಂತ್ರ ಪೂತವಾದ ಶಿಖಾವನ್ನು ಧರಿಸಿ ಮಂತ್ರದಿಂದಲೇ ಶಿಖಾ ಬಂಧನ ಮಾಡಬೇಕು.

ಸ್ಮೃತ್ವೋಂಕಾರಂ ಚ ಗಾಯತ್ರೀಂ ನಿಬಧ್ನೀಯಾತ್ ಶಿಖಾಂ ತತಃ (ಶೌನಕಸ್ಮೃತಿ, ಆಚಾರ-೩೫). ಗಾಯತ್ರ್ಯಾತು ಶಿಖಾಂ ಬಧ್ವಾ ನೈಋತ್ಯಾಂ ಬ್ರಹ್ಮರಂಧ್ರತಃ । ಪಶ್ಚಾತ್ತು ಜುಟಿಕಾಂ ಬಧ್ವಾ ಸರ್ವಕರ್ಮ ಸಮಾರಭೇತ್. (ಸುಮಂತು ಸ್ಮೃತಿ).

ಓಂಕಾರವನ್ನು ಸ್ಮರಿಸಿ ಗಾಯತ್ರೀ ಮಂತ್ರವನ್ನುಚ್ಚರಿಸಿ ಶಿಖೆಯನ್ನು ಗಂಟು ಹಾಕುವುದು. ಪುರುಷನು ಪೂರ್ವಾಭಿ ಮುಖವಾಗಿರುವಾಗ ನೈಋತ್ಯ ದಿಕ್ಕಿನಲ್ಲಿ ಮೊದಲು ಕೊನೆಗಂಟು ಹಾಕಿ ನಂತರ ಅದನ್ನು ಸೇರಿಸಿ ಜುಟ್ಟನ್ನು ಕಟ್ಟಿ ಎಲ್ಲಾ ಉದ್ದಿಷ್ಟ ಕರ್ಮಗಳನ್ನೂ ಮಾಡುವುದು.

ಅನಿವಾರ್ಯದಲ್ಲಿ ಕರ್ತವ್ಯ :—

ಒಂದು ವೇಳೆ ಖಲ್ವಾಟ=ಬೊಕ್ಕತಲೆ (ಬೋಡು ತಲೆ) ಆಗಿ ಕೂದಲು ಉದುರಿ ಶಿಖಾ ಇಲ್ಲದಿದ್ದಲ್ಲಿ, ಒಂದು ದರ್ಭೆಯನ್ನು ಗಂಟು ಹಾಕಿ ತಲೆಯ ಮೇಲಿಟ್ಟು ಕೊಂಡು, ಕರ್ಮಾಚರಣೆ ಆರಂಭಿಸಬೇಕು.

ಖಲ್ವಾಟತ್ವಾದಿ ದೋಷೇಣ ವಿಶಿಖಶ್ಚೇನ್ನರೋ ಭವೇತ್ ।
ಕೌಶೀಂ ತದಾ ಧಾರಯೀತ ಬ್ರಹ್ಮಗ್ರಂಥಿಯುತಾಂ ಶಿಖಾಂ ॥
(ಕಾರಿಕೆ, ಆಚಾರೇಂದು-೧೪)

ಯಾವುದೇ ಪ್ರಸಂಗದಲ್ಲಿ ಸತ್ಕಾರ್ಯ ಮಾಡುವಾಗ ಶಿಖಾಗಂಟು ಹಾಕಿಕೊಳ್ಳ ಲೆಬೇಕು.

ಶಿಖಾ ಗಂಟು ಹಾಕದಿದ್ದಲ್ಲಿ ಪ್ರತ್ಯವಾಯ :—

ವಿನಾ ಯಜ್ಞೋಪವೀತೇನ ತಥಾಧೌತೇನ ವಾಸಸಾ॥
ಶಿಖಾಂ ವಾಮುಕ್ತ್ವಾ ವಾಪ್ಯಾಚಾಮೇತ್ ಕೃತಸ್ಯೈವ ಪುನಃಕ್ರಿಯಾ॥ ಪುಟ ೨೨೫
ನ ಮುಕ್ತ ಕೇಶೋ ಜುಹುಯಾತ್ ನಾಸಿ ಪಾತಿತ ಜಾನುಕಃ ॥
ಅನಿಪಾತಿತ ಜಾನೋಸ್ತು ರಾಕ್ಷಸೈಹ್ರಿಯತೇ ಹವಿಃ ॥
(ಗೋಭಿಲೀಯ ಸ್ಮೃ, ಆಚಾರೇಂದು ಪುಟ ೨೫೩)

ಅಂದರೆ ಯಜ್ಞೋಪವೀತವಿಲ್ಲದೆ, ಶಿಖಾ ಬಂಧನ ಮಾಡದೆ, ಮಲಿನ ವಸ್ತ್ರಧಾರ ಣೆಯಿಂದ ಯುಕ್ತವಾದ ಕರ್ಮವು ನಿಷ್ಫಲವಾಗುತ್ತದೆ. ವೈಶ್ವದೇವಾದಿ ಹೋಮ ಗಳನ್ನು ಮಾಡಬೇಕಾದರೆ, ಕಾಲುಗಳನ್ನು ನೆಲದಲ್ಲಿಡದೇ (ಸ್ಪಷ್ಟವಾಗಿ ಕುಳಿತು ಕೊಳ್ಳದೇ) ಶಿಖಾ ಗಂಟು ಹಾಕದೆ ಮಾಡಿದ ಕರ್ಮವು ವ್ಯರ್ಥ. ರಾಕ್ಷಸರಿಂದ ತತ್ಫಲದ ಅಪಹರಣವಾಗುತ್ತದೆ.

ಶಿಖಾ ಬಿಚ್ಚ ಬೇಕಾದ ಕಾಲ :—

ತರ್ಜನೀಂ ರೌಪ್ಯ ಸಂಯುಕ್ತಾಂ ಬ್ರಹ್ಮಗ್ರಂಥಿಯುತಾಂ ಶಿಖಾಂ ॥
ಭೋಜನೇ ಮೈಥುನೇ ಮೂತ್ರೇ ಕುರ್ವನ್ ಕೃಚ್ಛ್ರೇಣ ಶುಧ್ಯತಿ ॥ ರತ್ನಮಾಲಾ ॥

ಬಂಗಾರದ ಅಥವಾ ಬೆಳ್ಳಿ ದ್ರವ್ಯವನ್ನು ತೋರು ಬೆರಳಿನಿಂದ ತೆಗೆಯದೇ, ಶಿಖಾ ಗಂಟು ಬಿಚ್ಚದೇ ಭೋಜನ, ಮೈಥುನ, ಮೂತ್ರ ವಿಸರ್ಜನಾದಿಗಳನ್ನು

ಮಾಡಬಾರದು. ಇದಕ್ಕೆ ಪ್ರಾಯಶ್ಚಿತ್ತವೆಂದರೆ, ಕೃಚ್ಛ್ರಾದಿ ವ್ರತಾಚರಣೆಗಳು. ಇವುಗಳಿಂದ ಶುದ್ಧನಾಗುತ್ತಾನೆ.

ತತಃ ಶಿಖಾಂ ಸ್ವಪುರತಃ ಕೃತ್ವಾ ಮಜ್ಜೇನ್ನದೀ ಮುಖಃ ||ಬ್ರಹ್ಮಾಂಡಪುರಾಣ||

ದಂತಧಾವನಾದಿಗಳ ತರುವಾಯ ಶಿಖೆಯನ್ನು ಬಿಚ್ಚಿ ಮುಂದೆ ತಂದುಕೊಂಡು ನದೀಮುಖವಾಗಿ ಸ್ನಾನಮಾಡಬೇಕು.

ವಪನ ವಿಧಿ :—

ಈ ಶಿಖಾ ಇಟ್ಟುಕೊಳ್ಳುವಾಗಲಾಗಲೀ ಕಾಲ ಕಾಲಕ್ಕೆ ವಪನ ಮಾಡಿಸುವ ಕಾರ್ಯದಲ್ಲಾಗಲೀ ನಿಯತ ಕ್ರಮದಿಂದಲೇ ಮಾಡಿಸಬೇಕು. ಈ ವಪನ ಕಾರ್ಯದಲ್ಲಿಯೂ ಕ್ರಮವನ್ನು ವಿಧಿಸಿದ್ದಾರೆ.

ಶ್ಮಶ್ರೂಣ್ಯಗ್ರೇವಾಪಯತೇಽಥೋಪ ಪಕ್ಷೌ ಅಥ ಕೇಶಾನ್ ಅಥಲೋಮಾನಿ ಅಥ ನಖಾನೀತಿ || ಗೃಹ್ಯಪ್ರಶ್ನೆ, ಆಚಾರ ಭೂಷಣ ಪುಟ ೧೪೪.

ಮೊದಲು ಮೀಸೆಯನ್ನು ನಂತರ ಉಪಪಕ್ಷ (ಗಡ್ಡ)ವನ್ನು, ನಂತರ ತಲೆಗೂದಲುಗಳನ್ನು, ದೇಹದ ಕೂದಲುಗಳನ್ನು ಅನಂತರ ನಖಗಳನ್ನು ವಪನ ಮಾಡಿಸಬೇಕು. (ನಖಗಳನ್ನು ಮಾತ್ರ ಕರ್ತನ ಮಾಡಿಸಬೇಕು)

ಇದು ಶ್ರುತಿಯಲ್ಲೂ ವಿಹಿತವಾಗಿದೆ. ದೇವತೆಗಳೂ ಮತ್ತು ಅಸುರರೂ ಸಹ ವಪನ ಮಾಡಿದರು ಎಂಬ ಪ್ರಸಂಗದಿಂದ, ವಪನವಿಧಿಯನ್ನೂ, ಅದರ ಫಲವನ್ನೂ ಹೇಳುತ್ತಾರೆ.

ದೇವಾ ಯದ್ಯಜ್ಞೇಽಕುರ್ವತ | ತದಸುರಾ ಅಕುರ್ವತ | ತೇಽಸುರಾ ಊರ್ಧ್ವಂ ಪೃಷ್ಠೇಭ್ಯೋ ನಾಪಶ್ಯನ್| ತೇಕೇಶಮಗ್ರೇಽ ವಪಂತ | ಅಥ ಶ್ಮಶ್ರೂಣಿ | ಅಥೋಪ ಪಕ್ಷೌ ತತಸ್ತೇವಾಜ ಚ ಆಯನ್ | ಪರಾಭವನ್ | ಯಸ್ಯೈವಂ ವಪಂತಿ | ಅವಾಜೇತಿ ||೧|| ಅಥೋಪರ್ಯೈವ ಭವಂತಿ | ಅಥದೇವಾ ಊರ್ಧ್ವಂ ಪೃಷ್ಠೇಭ್ಯೋಽಪಶ್ಯನ್ | ತ ಉಪಪಕ್ಷಾವಗ್ರೇಽ ವಪಂತ | ಅಥ ಶ್ಮಶ್ರೂಣಿ | ಅಥ ಕೇಶಾನ್ | ತತಸ್ತೇಽಭವನ್ | ಸುವರ್ಗಂ ಲೋಕ ಮಾಯನ್ | ಯಸ್ಯೈವಂ ವಪಂತಿ | ಭವತ್ಯಾತ್ಮನಾ ಅಥೊಸುವರ್ಗಂ ಲೋಕಮೇತಿ (ಕೃಷ್ಣಯಜುರ್ವೇದೀಯ ತೈತ್ತರೀಯ ಬ್ರಾಹ್ಮಣ)

ಅಸುರರು ಮೊದಲು ವಪನವನ್ನು ಕೆಳಗಿನಿಂದ ಮೇಲೆ ಮಾಡಬೇಕೆಂಬ ಶಾಸ್ತ್ರಾರ್ಥವನ್ನು ತಿಳಿಯಲಿಲ್ಲ ಅವರು ಮೊದಲು ತಲೆಗೂದಲುಗಳನ್ನು. ನಂತರ ಮೀಸೆಗಳನ್ನು ಉಪಪಕ್ಷಗಳನ್ನೂ ವಪನ ಮಾಡಿಸಿದರು. ಯಜ್ಞಾಚರಣೆಯಲ್ಲಿ ಮಾತ್ರ ದೇವತೆಗಳನ್ನನುಸರಿಸಿದರು. ವಪನ ಕಾರ್ಯದಲ್ಲಿ ಸ್ವಬುದ್ಧಿಯಿಂದ ಪ್ರವೃತ್ತರಾಗಿ,

ನೀಚರಾಗಿ ಸೋತುಹೋದರು. ಆದ್ದರಿಂದ ಯಾರು ದೈತ್ಯರಂತೆ ಮೇಲಿಂದ ಕೆಳಗೆ ವಪನ ಮಾಡಿಸುವರೋ ಅವರೂ ನೀಚರಾಗಿ ದುಃಖವನ್ನು ಅನುಭವಿಸುತ್ತಾರೆ.

ದೇವತೆಗಳಾದರೋ ಕಕ್ಷದಿಂದ ಊರ್ಧ್ವಕ್ರಮವಾಗಿ ಶಾಸ್ತ್ರಾರ್ಥ ತಿಳಿದು ಉಪ ಪಕ್ಷ, ಶ್ಮಶ್ರು, ಕೇಶ ಎಂಬ ಕ್ರಮದಿಂದ ವಪನ ಮಾಡಿಸಿ ಊರ್ಧ್ವಲೋಕ (ಸ್ವರ್ಗ) ವನ್ನು ಹೊಂದಿದರು. ಹೀಗೆ ಯಾರು ದೇವತಾನುಸಾರಿಗಳಾಗುತ್ತಾರೋ ಅವರು ಐಶ್ವರ್ಯವನ್ನು ಹೊಂದಿ ಸಮರ್ಥರಾಗಿ ಸ್ವರ್ಗವನ್ನು ಹೊಂದುತ್ತಾರೆ. (ಸಾಯಣ ಭಾಷ್ಯ ತಾತ್ಪರ್ಯ) ಇದಲ್ಲದೇ ಸ್ವಲ್ಪವೇ ವ್ಯತ್ಯಾಸವುಳ್ಳ ಕ್ರಮಾಂತರವೂ ಶ್ರುತಿ ಯಲ್ಲಿ ವಿಧಿಸಲ್ಪಟ್ಟಿದೆ. ೧ನೇ ಕಾಂಡ, ೫ನೇ ಪ್ರಪಾಠಕ, ೭ನೇ ಅನುವಾಕ, ೧, ೨, ೩ನೇ ಋಕ್‌ಗಳು.

ಅಥೈತನ್ಮನುರ್ವಪ್ತ್ರೇ ಮಿಥುನಮಪಶ್ಯತ್ । ಸ ಶ್ಮಶ್ರೂಣ್ಯಗ್ರೇಽವಪತ ।
ಅಥೋಪಪಕ್ಷೌ । ಅಥಕೇಶಾನ್ । ತತೋವೈಸಪ್ರಾಜಾಯತ ಪ್ರಜಯಾ
ಪಶುಭಿಃ । ಯಸ್ಯೈವಂ ವಪಂತಿ । ಪ್ರಪ್ರಜಯಾ ಪಶುಭಿರ್ಮಿಥುನೈರ್ಜಾಯತೇ ಇತಿ

ಮನುವು ವಪನಕ್ಕೋಸ್ಕರ ಊರ್ಧ್ವ ಮತ್ತು ನೀಚ ಈ ಎರಡೂ ಕ್ರಮ ಗಳನ್ನೂ ನೋಡಿದನು. ಮೊದಲು ಮೀಸೆ, ಉಪಪಕ್ಷ ನಂತರ ಕೇಶ ಈ ಕ್ರಮದಿಂದ ವಪನ ಮಾಡಿಸಿದನು. ಆದ್ದರಿಂದ ಮಕ್ಕಳಿಂದಲೂ, ಪಶುಗಳಿಂದಲೂ ಕೂಡಿದವ ನಾಗಿ ಐಶ್ವರ್ಯ ಹೊಂದಿದನು. ಹೀಗೆ ಯಾರು ಮಾಡುತ್ತಾರೋ ಅವರೂ ಮಕ್ಕಳು, ಐಶ್ವರ್ಯ, ಪಶುಗಳು ಮುಂತಾದುವನ್ನು ಹೊಂದುತ್ತಾರೆ (ಸಾಯಣ ಭಾಷ್ಯ ತಾತ್ಪರ್ಯ)

ಅಗ್ನಿರೇವ ಶಿಖಾನಾನ್ಯಾ ಯಸ್ಯಜ್ಞಾನಮಯೀ ಶಿಖಾ। ಸಶಿಖೀತ್ಯುಚ್ಯತೇ
ವಿದ್ವಾನ್‌ನೇತರೇ ಕೇಶಧಾರಿಣಃ ॥೧೧॥ (ಅಥರ್ವ ಬ್ರಹ್ಮೋಪನಿಷತ್)

ಶಿಖಾ ಎನ್ನುವುದು ಅಗ್ನಿಯಿದ್ದಂತೆ. ಯಾರಿಗೆ ಜ್ಞಾನಮಯವಾದ ಶಿಖೆ ಯಿರುವುದೋ ಅವರೇ ಶಿಖಿಗಳು. ಕೇವಲ ಕೂದಲುಧಾರಣೆ ಮಾಡಿದವರೆಲ್ಲಾ ಶಿಖಿ ಗಳಲ್ಲ. ಅಂದರೆ ಶಿಖಾ ಇಟ್ಟುಕೊಂಡು ಜ್ಞಾನಾರ್ಜನೆ ಮಾಡದಿದ್ದರೆ ಆ ಶಿಖಾ ವ್ಯರ್ಥವಾಗುತ್ತದೆ ಎಂದು ಹೇಳುವ ಈ ಉಪನಿಷತ್ತು ಜ್ಞಾನಕ್ಕೆ ಪ್ರಾಶಸ್ತ್ಯವನ್ನು ಹೇಳುತ್ತದೆ. ಜ್ಞಾನರಹಿತರಾಗಿ ಶಿಖಾಧಾರಣೆ ಮಾಡಿ, ಅನಾಚಾರಿಗಳಾಗುವುದು ವಿಹಿತವಲ್ಲ ಅಥವಾ ಜ್ಞಾನ ಸಂಪಾದಿಸಿ ಶಿಖಾಧಾರಣೆಯಿಲ್ಲದಿದ್ದರೆ ಅದೂ ಯುಕ್ತವಲ್ಲ. ಈ ವಿಷಯವನ್ನು ಅದೇ ಉಪನಿಷತ್ತು ಮುಂದಿನ ವಾಕ್ಯದಿಂದ ತಿಳಿಸುತ್ತದೆ.

ಶಿಖಾಜ್ಞಾನಮಯೀಯಸ್ಯ ಉಪವೀತಂಚ ತನ್ಮಯಂ ।
ಬ್ರಾಹ್ಮಣ್ಯಂ ಸಕಲಂ ತಸ್ಯ ಇತಿ ಬ್ರಹ್ಮವಿದೋವಿದುಃ ।೧೨॥

ಯಾರಿಗೆ ಜ್ಞಾನಮಯವಾದ ಶಿಖೆ, ಜ್ಞಾನಮಯವಾದ ಯಜ್ಞೋಪವೀತ ವಿರುತ್ತದೋ ಅವನಿಗೆ ಎಲ್ಲಾ ವಿಧವಾದ ಬ್ರಾಹ್ಮಣ್ಯವೂ ಬರುತ್ತದೆ ಎಂದು ಬ್ರಹ್ಮ ಜ್ಞಾನಿಗಳು ಹೇಳುತ್ತಾರೆ. ಇದರ ತಾತ್ಪರ್ಯ ಹೀಗೆ ಇರುತ್ತದೆ :—

ಯಾರು ಶಿಖಾ ಯಜ್ಞೋಪವೀತಗಳನ್ನು ಧರಿಸಿ ಯೋಗ್ಯ ಸ್ವಕರ್ಮಾನುಷ್ಠಾನದಿಂದ ಶುದ್ಧವಾದ ಅಂತಃಕರಣ ಉಳ್ಳವರಾಗಿ ಜ್ಞಾನಾರ್ಜನೆ ಮಾಡುತ್ತಾರೋ ಅವರು ಜ್ಞಾನಮಯವಾದ ಶಿಖಾ, ಯಜ್ಞೋಪವೀತವುಳ್ಳವರಾಗಿ ಸಕಲ ವಿಧ ಬ್ರಾಹ್ಮಣ್ಯವನ್ನೂ ಪಡೆಯುತ್ತಾರೆ ಹಾಗೂ ಜ್ಞಾನವನ್ನು ಶಿಖಾ ಯಜ್ಞೋಪವೀತಗಳಿಂದ ಸಾಂಗ ಕರ್ಮಾನುಷ್ಠಾನ ಮಾಡದೇ ಅಶುದ್ಧವಾದ ಅಂತಃಕರಣದಲ್ಲಿ ತುಂಬುವವರೂ ಸಹ ಹಾಳಾಗುತ್ತಾರೆ. ಅಶುದ್ಧವಾದ, ಕೆಟ್ಟುಬಿದ ಪಾತ್ರೆಯಲ್ಲಿ ಶುದ್ಧವಾದ ಹಾಲು ತುಂಬಿದವರಂತೆ ಅವರೂ ಬ್ರಾಹ್ಮಣ್ಯಕ್ಕೆ ಅಯೋಗ್ಯರಾಗುತ್ತಾರೆ.

ಯಜ್ಞೋಪವೀತ—ಶಿಖಾ, ಇವೆರಡಕ್ಕೂ ಕರ್ಮಗಳಲ್ಲಿ ಸಮಾನಸ್ಥಾನವಿದೆ. ಇವೆರಡರಿಂದ ರಹಿತನಾದವನು ಎಲ್ಲಾ ಕರ್ಮಗಳ ಅನುಷ್ಠಾನಕ್ಕೂ ಅನಧಿಕಾರಿಯಾಗುತ್ತಾನೆ.

"ಯಜ್ಞಸೂತ್ರವಿಹೀನಸ್ಸ್ಯಾದನರ್ಹಃ ಸರ್ವಕರ್ಮಸು ।
ಸೂತ್ರಸ್ಯೈವ ಭವೇನ್ಮಂತ್ರಃ ಶಿಖಾಹೀನಶ್ಚತಾದೃಶಃ ॥"

(ಅಂಗಿರಸ ಸ್ಮೃತಿ, ಪುಟ ೫೫)

ಒಂದು ವೇಳೆ ಶತೃಗಳು ದ್ವೇಷದಿಂದ ಶಿಖಾವನ್ನು ಕತ್ತರಿಸಿದರೆ ಆ ಕ್ಷಣದಲ್ಲೇ ದೇಹದ ಯಾವುದಾದರೊಂದು ಕೂದಲನ್ನು ಕಿವಿಯ ಮೇಲಿಟ್ಟುಕೊಂಡು ತಾತ್ಕಾಲಿಕವಾಗಿ ಕರ್ಮಾನುಷ್ಠಾನದ ನಿರ್ವಾಹ ಮಾಡಬೇಕು.

ಏನಕೇನಪ್ರಕಾರೇಣ ಒಂದು ಕ್ಷಣವೂ ಶಿಖಾ ಇಟ್ಟುಕೊಳ್ಳದೆ ಇರಬಾರದೆಂಬುದು ಅಂಗೀರಸ ಹೃದಯ.

"ಶತೃಚ್ಛಿನ್ನಶಿಖಃ ಸದ್ಯೋ ಬಿಭ್ರನ್ ಕರ್ಣೇ ಶುಚಿರ್ಯತನ್ ।
ಪುನಃ ಸಂಸ್ಕಾರತಃ ಶುದ್ಧಃ ಪ್ರಭವೇನ್ನಾತ್ರ ಸಂಶಯಃ ॥"

(ಅಂಗೀರಸ ಸ್ಮೃತಿ, ಪುಟ ೫೭)

ಕಿವಿಯಲ್ಲಿ ಕೂದಲಿರಿಸುವುದು ಅಥವಾ ಗೋಪುಚ್ಛದ ಕೂದಲನ್ನು ಧರಿಸುವುದು ಕೇವಲ ತಾತ್ಕಾಲಿಕ ಕಾರ್ಯ ನಿರ್ವಹಣೆಯಾದರೂ ಮತ್ತೊಮ್ಮೆ ಚೌಲ ಸಂಸ್ಕಾರದಿಂದಲೇ ಪುರುಷನಿಗೆ ಶುದ್ಧಿ.

ಶಿಖಾಯಾಃ ರೋಗತೋನಾಶೇ ಕ್ಷತ್ನಾಯಾಃ ಸಂಕಟೇಽಪಿವಾ ।
ಅವಶಾನ್ನಷ್ಟಿತೋವಾಪಿ ಪುನಃ ಸಂಸ್ಕಾರ ಏವ ಹಿ ॥ [೧]

ಶಿಖಾರೋಹಣತಃ ಪಶ್ಚಾನ್ನತತ್ಪೂರ್ವಂ ಸಮಾಚರೇತ್ ।
ತಾವದ್ಗೋಪುಚ್ಛಲೋಮಾನಿ ಧಾರ್ಯಾಣ್ಯೇವ ವಿಧಾನತಃ ॥ [೨]

ಪಾರ್ಶ್ವತಃ ಪರಿಶೋಽಪಿವಾಽಪಿ ಸಮುದ್ಭೂತೈಶ್ಚ ರೋಮಭಿಃ ।
ಶಿಖಾ ಕಾರ್ಯ ಪ್ರಯತ್ನೇನ ನಚೇನ್ನ್ಯೂನೋಪಪದ್ಯತೇ ॥ [೩]

ಬ್ರಾಹ್ಮಣ್ಯಸೂಚನಾಯ್ಯೈವಂ ತಾನಿ ಲೋಮಾನಿ ಧಾರಯೇತ್ ।
ಅನ್ಯಥಾ ನಭವೇದೇವಂ ತಥಾ ತಸ್ಮಾತ್ ಸಮಾಚರೇತ್ [೪]
ಶಿಖಾಂ ಸೂತ್ರಂ ಚ ತದ್ಯುಗ್ಮಂ ಬಾಹ್ರಣತ್ವಸ್ಯ ಮೂಲಕೇ
ಯಯಾ ಕಯಾ ಚ ವಿಧಯಾ ಶಿಖಾಂ ಸೂತ್ರಂ ಚ ಭಿಭೃಯಾತ್ ॥ [೫]
ಶಿಖಾಚ್ಛೇದೋ ಪಂಚವಾರಂ ಯದಿ ಜಾಯೇತ ಶಸ್ತ್ರಭಿಃ ।
ಬ್ರಾಹ್ಮಣ್ಯಂ ತಸ್ಯ ನಷ್ಟಂ ಸ್ಯಾತ್ ಪುನಸ್ಸಂಸ್ಕಾರತೋऽಪಿ ತತ್ ॥ [೬]
(ಅಂಗೀರಸ ಸ್ಮೃತಿ ೫೮-೬೫)

೧) ರೋಗದಿಂದಾಗಲಿ, ಬೆಂಕಿ ತಗಲಿದಾಗಲಿ, ಸಂಕಟದಿಂದಾಗಲಿ, ಬಲಾತ್ಕಾರ ನಿಮಿತ್ತದಿಂದಾಗಲಿ ಶಿಖಾ ಸಂಪೂರ್ಣವಾಗಿ ನಾಶವಾದರೆ ಪುನಃ ಮತ್ತೊಮ್ಮೆ ಚೌಲ ಸಂಸ್ಕಾರ ಮಾಡಿಕೊಳ್ಳಬೇಕು.

೨) ಶಿಖೆಯ ಕೂದಲು ಬೆಳೆಯುವ ಪರಿಯಂತ ಗೋಪುಚ್ಛ ಕೂದಲು ಧರಿಸಬೇಕು.

೩) ಶಿರಸ್ಸಿನ ಎಡ-ಬಲ, ಹಿಂದೆ, ಹೀಗೆ ಯಾವುದಾದರೊಂದು ಭಾಗದಲ್ಲಿ ಉಳಿದಿರುವ (ಹುಟ್ಟಿರುವ) ರೋಮಗಳಿಂದ ಪ್ರಯತ್ನಪೂರ್ವಕವಾದರೂ ಶಿಖಾ ಧರಿಸಬೇಕು. ಇಲ್ಲದಿದ್ದರೆ ಯಾವುದೂ ಸಹ ಉಪಪನ್ನವಾಗಲಾರದು.

೪) ಬ್ರಾಹ್ಮಣತ್ವ ಸೂಚನೆಗಾಗಿ ಶಿಖಾಧಾರಣೆ ಅತ್ಯವಶ್ಯ. ಹಾಗೆ ಧರಿಸದಿದ್ದಲ್ಲಿ ಬ್ರಾಹ್ಮಣ್ಯವು ಉಳಿಯುವುದಿಲ್ಲ. ಆದ್ದರಿಂದ ಪೂರ್ವೋಕ್ತ ಪ್ರಕಾರ ಆಚರಿಸಲೇಬೇಕು.

೫) ಶಿಖಾ ಮತ್ತು ಯಜ್ಞೋಪವೀತಗಳೆರಡೂ ಬ್ರಾಹ್ಮಣ್ಯದ ಮೂಲವಾಗಿದೆ. ಯಾವುದಾದರೊಂದು ಕ್ರಮದಿಂದ ಅವೆರಡನ್ನೂ ಧರಿಸುವುದು ಆದ್ಯ ಕರ್ತವ್ಯ.

೬) ಶಿಖಾವನ್ನು ಐದು ಸಲ ಕತ್ತರಿಸಿ ಮತ್ತೆ ಧರಿಸಿದರೆ ಬ್ರಾಹ್ಮಣ್ಯವು ನಾಶವಾಗಿ ಮತ್ತೆ ಚೌಲ ಸಂಸ್ಕಾರ ಮಾಡಿದರೂ ಉಪಯೋಗವಿಲ್ಲ. ಇದು ಅಂಗೀರಸರ ಸ್ಪಷ್ಟ ಅಭಿಪ್ರಾಯ.

ಶಿಖಾ ಮೋಕ್ಷಸಾಧನ :—

"ಸರ್ವಾಣ್ಯಾಶ್ರಮ ಕರ್ಮಾಣಿ ನಿವಸಂತಿ ಶಿಖೋಪರಿ" (ಸಂಧ್ಯಾದರ್ಪಣ)

ಎಲ್ಲ ಆಶ್ರಮ ಕರ್ಮಗಳೂ ಶಿಖೆಯನ್ನು ಆಶ್ರಯಿಸಿರುತ್ತವೆ. ಕರ್ಮಾನುಷ್ಠಾನವಿಲ್ಲದೇ ಅಂತಃಕರಣ ಶುದ್ಧಿಯಿಲ್ಲ. ಮನಃಶುದ್ಧಿಯಿಲ್ಲದೆ ಜ್ಞಾನ ಸಿದ್ಧಿಯಾಗುವುದಿಲ್ಲ. ಜ್ಞಾನವಿಲ್ಲದೇ ಪರಾಪರತತ್ವಗಳ ವಿವೇಕ ಹುಟ್ಟುವುದಿಲ್ಲ. ವಿವೇಕವಿಲ್ಲದೆ ಮೋಕ್ಷದಾಯಕನಾದ ಶ್ರೀ ಮುಕುಂದನಲ್ಲಿ ಸುದೃಢ ಭಕ್ತಿ ಹುಟ್ಟುವುದಿಲ್ಲ. ಭಕ್ತಿಯಿಲ್ಲದೇ ಮೋಕ್ಷ ಸಿಗುವುದಿಲ್ಲ. ಹೀಗೆ ಪರಂಪರೆಗೆ ಮೂಲವಾದ ಶಿಖಾ ಯಜ್ಞೋ

ಪವೀತ, ವರ್ಣ ಆಶ್ರಮಧರ್ಮಗಳನ್ನು ಆಶ್ರಯಿಸಿದ ಮೇಲೆ ಶಿಖಾ ಯಜ್ಞೋಪವೀತಗಳು ಬಹು ಮುಖ್ಯವೇ ಆಗಿವೆ. ಆದ್ದರಿಂದ "ಮನಸ್ಸು ಶುದ್ಧವಾಗಿದ್ದರೆ ಸಾಕು. ಈ ಗೊಡ್ಡು ಮಡಿ, ಆಚಾರ, ಶಿಖಾದಿಗಳಿಂದ ಏನು ?" ಎಂಬ ಕೆಲವರ ವಾದವು ಕೇವಲ ಹಾಳುಹರಟೆ, ಪ್ರಮಾಣಗಳಿಂದ ವಿರುದ್ಧವಾಗಿದೆ. ತಾವು ಮಾಡುತ್ತಿರುವ ಅಪರಾಧಗಳನ್ನು ಮುಚ್ಚಿಡಲು, ಪರರ ಬಾಯಿ ಮುಚ್ಚಲು ಮಾಡುವ ಕುಯುಕ್ತಿ ಮಾತ್ರವೆ.

**ಶಿಖಾತ್ಯಾಗ=ಕರ್ಮ ಸನ್ಯಾಸ :—**

ಆದ್ದರಿಂದಲೇ ಕರ್ಮಸನ್ಯಾಸದ ಅಪೇಕ್ಷೆಯುಳ್ಳವರು ಸನ್ಯಾಸಾಶ್ರಮ ಸ್ವೀಕರಿಸಿ ಸನ್ಯಾಸಿಗಳಾಗಿ ಸಾಧನ ಮಾಡಬಹುದೆಂದು ವಿಧಿಸುವ ವೇದವು ಸನ್ಯಾಸ ಸ್ವೀಕಾರದ ಕ್ರಮವನ್ನು ತಿಳಿಸುವಾಗ ಪ್ರಥಮದಲ್ಲಿ ಶಿಖಾ ಯಜ್ಞೋಪವೀತಗಳನ್ನು ತ್ಯಜಿಸಲು ಆಜ್ಞಾಪಿಸಿರುತ್ತದೆ.

ಓಂ ಆರುಣಿಃ ಪ್ರಜಾಪತೇರ್ಲೋಕಂ ಜಗಾಮ । ತಂ ಗತ್ವೋವಾಚ
ಕೇನ ಭಗವನ್ ಕರ್ಮಾಣ್ಯಶೇಷತೋ ವಿಸೃಜಾನೀತಿ ?
ತಂ ಹೋವಾಚ ಪ್ರಜಾಪತಿಃ ।

ತವಪುತ್ರಾನ್, ಭ್ರಾತೄನ್, ಬಂಧ್ವಾದೀನ್ ಶಿಖಾಂ, ಯಜ್ಞೋಪವೀತಂ ಚ ಯಾಗಂ ಚ ಸೂತ್ರಂ ಚ.........ಇತ್ಯಾದಿ ..........(ಆರುಣೇಯೀ ಅಥರ್ವವೇದ ಉಪನಿಷತ್)

ಆರುಣಿಯು ಪ್ರಜಾಪತಿಯ ಲೋಕಕ್ಕೆ ಹೋದನು. ಅಲ್ಲಿ ಪ್ರಜಾಪತಿಯನ್ನು ಕುರಿತು ನಾನು ಎಲ್ಲ ಕರ್ಮಗಳನ್ನು ಬಿಡಬೇಕು. ಅದಕ್ಕೆ ಉಪಾಯವೇನು ? ಎಂದು ಕೇಳಿದಾಗ ಪ್ರಜಾಪತಿಯು 'ನೀನು, ನಿನ್ನ ಹೆಂಡತಿ ಮಕ್ಕಳೇ ಮೊದಲಾದ ಪರಿವಾರವನ್ನು, ಶಿಖಾ-ಯಜ್ಞೋಪವೀತವನ್ನು, ಯಾಗ ಸೂತ್ರಾದಿಗಳನ್ನು ಬಿಡು (ತೆಗೆದು ಹಾಕು) ಶಿಖಾ ತೆಗೆದರೆ ಕರ್ಮಪರಿತ್ಯಾಗ ಮಾಡಿದಂತೆ ಎಂದು ಉಪದೇಶಿಸಿದನು.

ವಿದ್ವಾಂಸರು ಪರಮಹಂಸರೆಂದಾಗಬೇಕಾದರೆ ಶಿಖಾ-ಯಜ್ಞೋಪವೀತವನ್ನು ತೆಗೆಯಬೇಕೆಂದು ಬ್ರಹ್ಮೋಪನಿಷತ್ ಹೇಳುತ್ತದೆ.

ಸಶಿಖಂ ವಪನಂ ಕೃತ್ವಾ ಬಹಿಃ ಸೂತ್ರಂ ತ್ಯಜೇದ್ಬುಧಃ ।
ಯದಕ್ಷರಂ ಪರಂಬ್ರಹ್ಮ ತತ್ಸೂತ್ರಮಿತಿಧಾರಯೇತ್ ॥

ಇದೇ ಅಭಿಪ್ರಾಯ ಪರಮಹಂಸೋಪನಿಷತ್‌ನಲ್ಲೂ ಇದೆ.

ಅಸೌ ಸ್ವಪುತ್ರ-ಮಿತ್ರ-ಕಲತ್ರ-ಬಂಧ್ವಾದೀನ್ ಶಿಖಾಯಜ್ಞೋಪವೀತೇ ಸ್ವಾಧ್ಯಾಯಂ ಚ ಸರ್ವಕರ್ಮಾಣಿ ಸನ್ನ್ಯಸ್ಯಾಯಂ ಬ್ರಹ್ಮಾಂಡಂ ಚ ಹಿತ್ವಾ ಕೌಪೀನಂ ದಂಡಮಾಚ್ಛಾದನಂ ಚ ಸ್ವಶರೀರೋಪಭೋಗಾರ್ಥಾಯ ಚ ಲೋಕಸ್ಯೋಪಕಾರಾರ್ಥಾಯ ಚ ಪರಿಗ್ರಹೇತ್ತ್ಚ ನ ಮುಖ್ಯೋಽಸ್ತಿ ಕೋಽಯಂ ಮುಖ್ಯಾ ಇತಿ ಚೇದಯಂ ಮುಖ್ಯಃ

ಆಚ್ಛಾದನಂ=ಶಾಟೀ—ಈ ಶ್ರುತಿಗಳು ಶಿಖಾ ಇಟ್ಟುಕೊಂಡವರಿಗೆ ಮಾತ್ರ ಕರ್ಮಾಧಿಕಾರವನ್ನು ಭಾಷಾಂತರದಿಂದ ಸಮರ್ಥಿಸುತ್ತವೆ. ಕರ್ಮಗಳನ್ನು ನಿತ್ಯದಲ್ಲೂ ಅನುಷ್ಠಾನ ಮಾಡಿದವನಿಗಷ್ಟೇ ಕರ್ಮಸನ್ಯಾಸ ? ಅದರಂತೆಯೇ ಶಿಖಾ ಇಟ್ಟುಕೊಂಡವರಿಗಷ್ಟೇ ಅದರ ಪರಿತ್ಯಾಗ ?

ಆದಕಾರಣ ಇಷ್ಟು ಪ್ರಮಾಣಗಳನ್ನು ನೋಡಿದ ಮೇಲಾದರೂ ನಮ್ಮ ಕಣ್ಣುಗಳು ಅರಿವಾಗಿ ಅದನ್ನು ತಿದ್ದಿಕೊಂಡರೆ ಮೋಕ್ಷೈಷಿಗಳಾದ ನಮಗೆ ಸಾಧನೆಯಾಗುತ್ತದೆ.

**ಶಿಖಾಕ್ಕೆ ಪ್ರಮಾಣಾನಪೇಕ್ಷೆ :—**

ಯದ್ಯಪಿ ಶಿಖಾಧಾರಣೆಯಲ್ಲಿ ಸಾತ್ವಿಕರು ಯಾವ ಪ್ರಮಾಣಗಳನ್ನೂ ತಿಳಿಯದಿದ್ದರೂ ತಮ್ಮ ಪೂರ್ವಜರನ್ನು ನೋಡಿ ಅವರಂತೆ ನಡೆದುಕೊಳ್ಳುತ್ತಾರೆ. ಅವರಿಗೆ ಯಾವ ಲಿಖಿತ ಪ್ರಮಾಣದ ಅಪೇಕ್ಷೆಯೂ ಇಲ್ಲ. ಆದರೂ ತಮ್ಮ ಪೂರ್ವಿಕರು ನಡೆದು ಬಂದ ಹಾದಿ, ಅವರು ಹಾಕಿಕೊಟ್ಟ ಸಂಪ್ರದಾಯವು ಅರ್ಥಪೂರ್ಣವಾಗಿದೆ ಮತ್ತು ಪ್ರಮಾಣ ಪುರಸ್ಸರವಾಗಿದೆ ಎಂಬುದನ್ನು ತೋರಿಸಲು ಮಾತ್ರ ಈ ಪ್ರಯತ್ನ ಮಾಡಬೇಕಾಯಿತು. ನಮ್ಮ ಪೂರ್ವಾಚಾರ್ಯರ ಸಂಪ್ರದಾಯಕ್ಕಿಂತ ಮತ್ತೊಂದು ಪ್ರಮಾಣದ ಅವಶ್ಯಕತೆ ಇಲ್ಲ. ಏಕೆಂದರೆ (ಆಚಾರೇಂದು ಪುಟ ೬೭ರಲ್ಲಿ) "ಶಾಖಾಂ ಶಿಖಾಂ ಚ ಪುಂಡ್ರಂ ಚ ಸಮಯಾಚಾರನೇವ ಚ। ಪೂರ್ವೈರಾಚರಿತಂ ಕುರ್ಯಾತ್ ಅನ್ಯಥಾ ಪತಿತೋ ಭವೇತ್" (ವಿಷ್ಣು ಪುರಾಣ)

ಋಕ್ ಶಾಖಾ, ಯಜುಃಶಾಖಾ ಇತ್ಯಾದಿ ವಿಷಯದಲ್ಲಿ, ಶಿಖಾ ವಿಷಯದಲ್ಲಿ, ಊರ್ಧ್ವಪುಂಡ್ರಾದಿಗಳ ಧಾರಣದಲ್ಲಿ ಪೂರ್ವಿಕರನ್ನೇ ಅನುಸರಿಸಬೇಕು. ಇಲ್ಲದಿದ್ದರೆ ಪತಿತನಾಗುತ್ತಾನೆ.

ಸಾಮಾನ್ಯವಾಗಿ ಈಗಿರುವವರ (ಬ್ರಾಹ್ಮಣರ) ಅಜ್ಜ ಮುತ್ತಜ್ಜ ಅವರ ಜೀವನ ಕ್ರಮವನ್ನು ನೋಡಿದರೂ ಅವರು ನಡೆದು ಬಂದ ದಾರಿ ಅವರ ಸಂಪ್ರದಾಯ ತಿಳಿಯುತ್ತದೆ "ನಾನೊಬ್ಬ ಬ್ರಾಹ್ಮಣ ! ನನ್ನ ವಂಶ ಇಂತಹುದು, ನನ್ನ ತಂದೆ ಇಂತವರು ಎಂದು ಹೇಳಿಕೊಳ್ಳಲೂ ನಾಚಿಕೊಂಡವನು ಬದುಕಿ ಏನು ಉಪಯೋಗ?

**ಈಗಿನ ನಮ್ಮ ಸ್ಥಿತಿ :—**

ಪೂರ್ವಿಕರೂ, ಪ್ರಾಚೀನರೂ ಆದ ಹಿರಿಯರ ಮತ್ತು ತಂದೆ ತಾಯಿಗಳ ಮಾತು ಕೇಳದೆ ಅವರನ್ನೂ, ಶಾಸ್ತ್ರವನ್ನೂ, ಸದಾಚಾರವನ್ನೂ ಉಲ್ಲಂಘಿಸಿ ಕಾರಣಾಂತರದಿಂದ ಎಲ್ಲಿಂದಲೋ ಈ ಪವಿತ್ರ ಭಾರತ ಭೂಮಿಗೆ ಬಂದು ನಮ್ಮನ್ನು ಆಳಿ ತಿರುಗಿ ಹೋದಂತಹ ಆಂಗ್ಲರ ಈ ಕ್ರಾಫ್ ಸಂಪ್ರದಾಯದಲ್ಲಿ ನಮ್ಮ ಜನಕ್ಕೆ ಏಕೆ ಅಷ್ಟೊಂದು ದೀಕ್ಷೆಯೋ ದೇವರೇ ಬಲ್ಲ! "ಲಾವಣ್ಯಂ ಕೇಶ ಧಾರಣಂ" ಎಂದು ಭಾಗವತದಲ್ಲಿ ಕೇಶ (ತಲೆಗೂದಲು) ಧರಿಸುವುದೇ ಅಲಂಕಾರ, ಲಾವಣ್ಯ ಎಂಬುದು ಕಲಿಯುಗದ ಧರ್ಮವೋ ಏನೋ ? 'ನಾನು ಬ್ರಾಹ್ಮಣನಲ್ಲ' ಎಂದು ತೋರಿಸು

ವಂತೆ ವೇಷ-ಭೂಷಣ, ಅನಾಚಾರಗಳನ್ನು ಎಷ್ಟು ಮಾಡಿದರೂ ಸರ್ಕಾರದವರು ನಮ್ಮನ್ನು ಬ್ರಾಹ್ಮಣರೆಂದೇ ಕರೆಯುತ್ತಾರೆ. ಬ್ರಾಹ್ಮಣ ನೌಕರನಿಗೆ ಯಾವ ದರ್ಜೆಯು ಸ್ಥಾನ ಕೊಡಬೇಕೆಂದು ಸರಕಾರದವರು ನಿರ್ಣಯಿಸುತ್ತಾರೋ ಅದನ್ನೇ ಕೊಡುತ್ತಾರೆ. ಹೀಗಿರುವಾಗ ನಾವೇಕೆ ನಮ್ಮ ಸತ್ಸಾಂಪ್ರದಾಯಿಕವಾದ, ಉತ್ತಮವಾದ, ವೈಷ್ಣವರ ಪ್ರಧಾನ ಚಿಹ್ನೆಯಾದ ಶಿಖಾ ಮೊದಲಾದ ವೇಷ-ಭೂಷಣಗಳನ್ನು ಆಚ್ಛಾದನೆ ಮಾಡಿಕೊಳ್ಳಬೇಕು ?

**ಶಿಖಾ ಇದ್ದರೂ ಅಭಾಸ ವೈದಿಕ :—**

ಕೆಲವರು ಹಿಂದೆ ಶಿಖಾ ವೈದಿಕರ ಸಮಾಧಾನಕ್ಕಾಗಿ, ಮುಂದೆ ಕ್ರಾಫ್ ಲೌಕಿಕ ಸುಧಾರಣೆಗಾಗಿ, ಹೀಗೆ ಏಕಕಾಲದಲ್ಲಿ ಶಿಖಾಸಹಿತವಾದ ಕ್ರಾಫ್ ಧರಿಸಿ ಉಭಯತೋ ಭ್ರಷ್ಟರಾಗಿ ಅವಲಕ್ಷಣ ಮಾಡಿಕೊಳ್ಳುತ್ತಾರೆ. ಇದು ಹಾಸ್ಯಾಸ್ಪದ ಹಾಗೂ ಶಿಖಾಕ್ಕೆ ಮಾಡಿರುವ ಅವಮಾನವಷ್ಟೇ ?!! ಈ ರೀತಿ ಮಾಡುವುದು "ರಾಮಾಯ ಸ್ವಸ್ತಿ, ರಾವಣಾಯ ಸ್ವಸ್ತಿ" ಎಂಬಂತೆ ಒಳ್ಳೆಯದು, ಕೆಟ್ಟದ್ದು ಎರಡಕ್ಕೂ ಮಂಗಳ ಹಾಡುವ ಅವಿವೇಕಿಯ ಬುದ್ಧಿ ವಿಜೃಂಭಿತವೇ ಸರಿ ಹಾಗೂ ನಮಗೆ ಈ ಶಿಖಾ ವಿಷಯದಲ್ಲಿ ಎಷ್ಟರಮಟ್ಟಿಗೆ ದಾರ್ಢ್ಯವಿದೆ ? ಎಂಬುದನ್ನು ನಮ್ಮ ಸಂಕುಚಿತ ಬುದ್ಧಿಯಿಂದ ನಾವೇ ಜಗತ್ತಿಗೆ ತೋರಿಸಿಕೊಟ್ಟಂತಾಗುತ್ತದೆ ವೈದಿಕ ಸಂಪ್ರದಾಯಕ್ಕೆ ಈ ರೀತಿ ಮಾಡಿದ ಅಪಮಾನದಿಂದ ಮತ್ತೊಂದು ಪಾಪಕರ್ಮದ ಸಾಧನೆ ಮಾಡಿಕೊಳ್ಳುವುದು ಹಾಸ್ಯಾಸ್ಪದ. ಆದ್ದರಿಂದ ಆ ರೀತಿಯ ಮಾರ್ಗವನ್ನು ಬಿಟ್ಟು ನಾವೇಕೆ ನಮ್ಮ ಸ್ವಧರ್ಮವನ್ನು ಉಳಿಸಿಕೊಂಡು, ಪಾರಮಾರ್ಥಿಕ ಸಾಧನೆಯನ್ನಾದರೂ ಮಾಡಬಾರದು ?

ಅಹಹ ಕಲಿಕಾಲಸ್ಯ ಮಹಿಮಾ ?!!!

ಇದರಿಂದ ವೇದಕ್ಕೆ, ವೈದಿಕಧರ್ಮಕ್ಕೆ, ವೈದಿಕ ಸಂಪ್ರದಾಯಕ್ಕೆ, ವೈದಿಕರಿಗೆ, ಪ್ರಾಚೀನಾರ್ಯರಿಗೆ ಆಗುವ ಅವಹೇಳನ-ಅಪಮಾನಕ್ಕಂತೂ ಮಿತಿಯೇ ಇಲ್ಲ.

ಯುವನೋ ಒಬ್ಬ ಶಿಖಾ ಧರಿಸಿದ ವೈದಿಕಾಭಾಸನು ಖಾನಾವಳಿಯಲ್ಲಿ (ಹೋಟೆಲ್‌ನಲ್ಲಿ) ತಿನ್ನುವುದೇ ಮೊದಲಾದ ದುರಾಚಾರ ಮಾಡುವುದನ್ನು ನೋಡಿ ಸಮಸ್ತ ವೈದಿಕ ಸಮುದಾಯವನ್ನೇ ದೂಷಿಸುವುದು (ಹಾಸ್ಯ ಮಾಡುವುದು) ಅನುಚಿತ. ಈ ವಿಧವಾದ ಕೆಲವರ ಬುದ್ಧಿ ದೋಷವನ್ನು ಕಾಲದ ಮೇಲೆ ಹೊರಿಸುವುದೂ ಸಹ ಮೂರ್ಖತನವೇ ಆಗಿದೆ.

ಈ ಪೂರ್ವೋಕ್ತ ಪ್ರಕಾರದ ಅತ್ಯುತ್ತಮ ಧರ್ಮಗಳನ್ನು ನಮಗೆ ಅನುಷ್ಠಾನ ಮಾಡಲು ಸಾಮರ್ಥ್ಯ ಸಾಲದಿದ್ದರೂ ಈ ಘೋರ ಕಲಿಯುಗದಲ್ಲಿ ಸಾಧಿಸುತ್ತಿರುವ ಧೀರ ಧರ್ಮಿಷ್ಠರಿಗೆ ಅನುಷ್ಠಾನ ಮಾಡಲು ಏಕೆ ಅವಕಾಶ ಕಲ್ಪಿಸಬಾರದು ? ಆದ್ದರಿಂದ "ಧರ್ಮೋ ರಕ್ಷತಿ ರಕ್ಷಿತಃ" ಎಂಬ ಅಭಿಯುಕ್ತೋಕ್ತಿಯಂತೆ ನಿರ್ವಂಚನ

ದಿಂದ ನಮ್ಮ ಸ್ವಧರ್ಮವನ್ನು ಅರಿತು ಯಥಾಯೋಗ್ಯ ರಕ್ಷಿಸುವುದು ನಮ್ಮ ಆದ್ಯ ಕರ್ತವ್ಯವಲ್ಲವೇ ? ಸ್ವಯಂ ಅಧರ್ಮಿಷ್ಠರಾಗಿ ಪರರಿಗೆ ದ್ರವ್ಯಾರ್ಥ ಧರ್ಮೋಪದೇಶ ಮಾಡುವುದು ವಂಚನೆಯಲ್ಲವೇ ?

ಸ್ವಯಮನವತೀರ್ಣಃ ಕಃಪರಾನ್ ತಾರಯಿಷ್ಯತಿ ?

ಬ್ರಾಹ್ಮಣನ ಸ್ವವರ್ಣಾಶ್ರಮ ಧರ್ಮರಕ್ಷಣೆಯಲ್ಲಿ ಪ್ರಥಮ ಪ್ರಧಾನಾಂಗವಾದ ಶಿಖಾವನ್ನು, ನಮೆಲ್ಲರಿಗೂ ಮಾರ್ಗದರ್ಶಕರೂ, ಸಜ್ಜನ ಜಗದ್ಗುರುಗಳೂ ಆದ ಮುಖ್ಯ ಪ್ರಾಣದೇವರು ತಮ್ಮ ಅವತಾರದಲ್ಲಿ ಸ್ವಯಂ ಅನುಷ್ಠಿಸಿ ತೋರಿಸಿದ್ದಾರೆ ಎಂಬುದನ್ನು ಶ್ರೀಸುಮಧ್ವವಿಜಯದಲ್ಲಿ—

"ಉಪನಿನಾಯ ಸುತಂ ಸಮಲಂಕೃತಂ ಕುಶಲಿನಂ ಕುಶಲೀಕೃತಶಿರ್ಷಕಮಂ" ಎಂದು ಹೇಳಿದ್ದಾರೆ. ನಾವು, ಅವರ ಶಿಷ್ಯರೆನಿಸಿ, ಅವರ ಮತಾನುಯಾಯಿಗಳಾಗಿ ಅವರು ನಡೆದಂತೆ ಏಕೆ ನಡೆದುಕೊಳ್ಳಬಾರದು ?

ನಮ್ಮ ಪ್ರಾಚೀನರ ಅನುಕರಣೆ, ಶಾಸ್ತ್ರಾನುಸಾರ ಅಥವಾ ಶಾಸ್ತ್ರವಿಹಿತ ಕರ್ಮಾನುಷ್ಠಾನ, ವೇದಾದ್ಯುಕ್ತ ಸದ್ಧರ್ಮ ಪರಿಪಾಲನೆ ಇವು ಸ್ವಲ್ಪ ಕಷ್ಟವಾದರೂ ಅವನ್ನು ನೆರವೇರಿಸಿ ಪರಮ ಅಪರೂಪವೂ, ಶ್ರೇಷ್ಠವೂ ಆದ ನಮ್ಮ (ವೈಷ್ಣವ) ಜನ್ಮವನ್ನು ಆದಷ್ಟೂ ಸಾರ್ಥಕಗೊಳಿಸೋಣ. ಇದೇ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀ ನಾರಾಯಣರಿಗೂ ಬಹು ಪ್ರೀತಿಕರ.

ಶ್ರೀನಿವಾಸ ಗುರೋರ್ದಿವ್ಯಾ ಚರಣಾಂಭೋರುಹಸ್ಮೃತಿಃ ।
ಮಾತಾ ಕೃತೇಃ ಭವತ್ಯಸ್ಯಾಃ ಕೇವಲಂ ಲೇಖಕಾ ವಯಮ್ ॥

ಶ್ರೀ ಶ್ರೀನಿವಾಸ ಗುರುಸದ್ ಹೃದಯಾಂತರಸ್ಥ ।
ಶ್ರೀ ಮಧ್ವಹೃತ್ಸರಸಿಜೇ ಕೃತವಾಸ ಭೂಮೇಃ ॥
ಶ್ರೀ ಭರ್ತುರಾಶ್ರಿತಜನಾಮಿತಪಾಪ ಹರ್ತುಃ ।
ಶ್ರೀ ಸೇವಿತೇ ಕೃತಿಮಿಮಾಂ ಚರಣೇರ್ಪಯೇಹಂ ॥

॥ ಮಧ್ವೇಶಾರ್ಪಣಮಸ್ತು ॥